2. **Employment :** The Company shall comply with the provisions of Industrial Policy 2014-19 of Govt. of Karnataka. Prepare a plan for development of Human Resources required for the project, train local people. A copy of Human Resources Development plan shall be sent to the Commissioner for Industrial Development & Director of Industries and Commerce for monitoring.

3. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub-assemblies from these local vendor unit. A copy of the vendor development plan shall be sent to the Commissioner for Industrial Development & Director of Industries and Commerce for monitoring.

4. **Social Infrastructure Development :** The Company is advised to take up social infrastructure development projects in the vicinity of the proposed location of the unit and comply with the stipulation of Company Act 2013. A copy of such projects shall be sent to the Commissioner for Industrial Development & Director of Industries and Commerce for monitoring.

5. **Others :**

   a) The company shall adopt rainwater harvesting, waste water recycling and water conservation techniques. Zero discharge facility should be adopted wherever applicable.

   b) The company shall take all statutory and other necessary clearances from the competent authorities including Govt. of India and shall submit milestones/progress in the implementation of the project regularly, which will be monitored by the Department.

   c) The company shall provide at least one employment per family of land looser.

This approval is valid for a period of two years from the date of issue of this Government Order.

By Order and in the name of the Governor of Karnataka

**P.R. 468**
**S.C. 25**

**S. UMADEVI**
Desk Officer (Technical Cell)
Commerce & Industries Department.

## COMMERCE AND INDUSTRIES SECRETARIAT

### CORRIGENDUM

### No. CI 173 SPI 2015, Bengaluru, dated 16-07-2015

**Sub :** Approval to the proposal of M/s Harsha Sugars Ltd., to establish "5,000 TCD Sugar Cane Crushig and 30 MW Co. Gen" at Savadatti, Belagavi District – reg.

**Read :** Government Order No. CI 316 SPI 2014, dated 27-03-2015.

In the order portion of Government Order No. CI 173 SPI 2015, dated 10-07-2015, under the head 'Land' the words ;

**"Land :** 82 Acre 25 Gunta of own land in various Sy. Nos. 411/1, 411/2, 411/3, 412, 413/1, 417/2, 417/6, 417/7, 409/1A+1B/1, 409/1A+ B/2, 409/2, 411/4, 417/8 of Savadatti Village, Savadatti Taluk, Belagavi District purchased in the name of the promoters of the company to be transferred in the name of the company U/s 109 of KLR Act".

May please be read as :

**"Land :** 82 Acre 25 Gunta of own land in various Sy. Nos. 411/1, 411/2, 411/3, 412, 413/1, 417/2, 417/6, 417/7, 409/1A+1B/1, 409/1A+ B/2, 409/2, 411/4, 417/8 of Savadatti Village, Savadatti Taluk, Belagavi District purchased in the name of the promoters of the company to be transferred in the name of the company U/s 109 of KLR Act". Approval of the proposal is subject to approval of ensuing Land Audit Committee".

The other terms and conditions remain the same as in the Government Order read at above.

By Order and in the name of the Governor of Karnataka

**P.R. 469**
**S.C. 25**

**S. UMADEVI**
Desk Officer (Technical Cell)
Commerce & Industries Department.

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** "ಚಿಣ್ಣರ ವನದರ್ಶನ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಪಮು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಅಪಮು)ಡಿ-1/ಬಿಯುಡಿ/ಸಿಆರ್62/2015-16, ದಿನಾಂಕ: 04.05.2015.

**ಪ್ರಸ್ತಾವನೆ :**

ಅರಣ್ಯಗಳು, ವನ್ಯಜೀವಿ ಸಂಕುಲ ಸಂರಕ್ಷಣೆ ಮಾಲಿನ್ಯ ಮುಕ್ತ ಪರಿಸರದ ಭವಿಷ್ಯಕ್ಕೆ ಅರಣ್ಯಗಳ ಉಳಿವು ಅತ್ಯವಶ್ಯಕ ಎಂಬ ಅರಿವನ್ನು ವಿದ್ಯಾರ್ಥಿಗಳಿಗೆ ಮೂಡಿಸಿ. ಪ್ರತಿಯೊಬ್ಬರನ್ನು ಭವಿಷ್ಯದ ಪರಿಸರ ಸ್ನೇಹಿ ನಾಗರಿಕರನ್ನಾಗಿ ರೂಪಿಸುವ ಸಲುವಾಗಿ ಸರ್ಕಾರಿ ಪ್ರೌಢಶಾಲೆಗಳಲ್ಲಿ ಓದುತ್ತಿರುವ 10,000 ವಿದ್ಯಾರ್ಥಿಗಳಿಗೆ ಅರಿವು ಮೂಡಿಸಲು "ಚಿಣ್ಣರ ವನದರ್ಶನ" ಎಂಬ ಯೋಜನೆಯನ್ನು 2015-16ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರವು 2015-16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಹೊಸ ಯೋಜನೆಯನ್ನು ಘೋಷಣೆ ಮಾಡಿದೆ.

ಮೇಲೆ ಓದಲಾದ ದಿನಾಂಕ: 04.05.2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು 2015-16ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಪ್ರಸ್ತಾಪಿಸಿರುವಂತೆ "ಚಿಣ್ಣರ ವನದರ್ಶನ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸಲು ಹಾಗೂ ಲೆಕ್ಕ ಶೀರ್ಷಿಕೆ 2406-01-102-2-25-103 (ಯೋಜನೆ)ರಡಿ ಒದಗಿಸಿರುವ ₹. 200.00 ಲಕ್ಷದ ಮಿತಿಯಲ್ಲಿ ಚಿಣ್ಣರ ವನದರ್ಶನ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 88 ಎಫ್‌ಎಪಿ 2015 ಬೆಂಗಳೂರು, ದಿನಾಂಕ : 15.07.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅರಣ್ಯಗಳು, ವನ್ಯಜೀವಿ ಸಂಕುಲ ಸಂರಕ್ಷಣೆ ಮಾಲಿನ್ಯಮುಕ್ತ ಪರಿಸರದ ಭವಿಷ್ಯಕ್ಕೆ ಅರಣ್ಯಗಳ ಉಳಿವು ಅತ್ಯವಶ್ಯಕ ಎಂಬ ಅರಿವನ್ನು ವಿದ್ಯಾರ್ಥಿಗಳಿಗೆ ಮೂಡಿಸಿ, ಪ್ರತಿಯೊಬ್ಬರನ್ನು ಭವಿಷ್ಯದ ಪರಿಸರ ಸ್ನೇಹಿ ನಾಗರಿಕರನ್ನಾಗಿ ರೂಪಿಸವ ದೃಷ್ಠಿಯಿಂದ ಸರ್ಕಾರಿ ಪ್ರೌಢಶಾಲೆಗಳಲ್ಲಿ ಓದುತ್ತಿರುವ 10,000 ವಿದ್ಯಾರ್ಥಿಗಳಿಗೆ ಅರಿವು ಮೂಡಿಸಲು "ಚಿಣ್ಣರ ವನ ದರ್ಶನ" ಎಂಬ ಹೊಸ ಯೋಜನೆಯನ್ನು ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ 2015-16ನೇ ಸಾಲಿನಿಂದ ಈ ಕೆಳಕಂಡ ಮಾರ್ಗಸೂಚಿಗಳೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

**1 <u>ಯೋಜನೆಯ ಉದ್ದೇಶ:</u>**

1. ಅರಣ್ಯಗಳು/ವನ್ಯಜೀವಿ ಸಂಕುಲಗಳು ನಮ್ಮ ಅಸ್ತಿತ್ವ ಮತ್ತು ಜೀವ ಜಲದ ಮೂಲಗಳೇ ಹೊರತು ಆದಾಯದ ಮೂಲವಲ್ಲ ಮತ್ತು ಮಾಲಿನ್ಯಮುಕ್ತ ಪರಿಸರದ ಭವಿಷ್ಯಕ್ಕೆ ಅರಣ್ಯಗಳ ಉಳಿವು ಅತ್ಯವಶ್ಯ ಎಂಬ ಅರಿವನ್ನು ವಿದ್ಯಾರ್ಥಿಗಳಲ್ಲಿ ಮೂಡಿಸಿ ಪ್ರತಿಯೊಬ್ಬರನ್ನು ಭವಿಷ್ಯದ ಪರಿಸರಸ್ನೇಹಿ ನಾಗರಿಕರನ್ನಾಗಿ ರೂಪಿಸುವುದು.
2. ರಾಜ್ಯದ ಎಲ್ಲಾ ಶಾಲಾ ವಿದ್ಯಾರ್ಥಿಗಳಲ್ಲಿ ಪರಿಸರದ ಜಾಗೃತಿ ಮೂಡಿಸುವುದು ಮತ್ತು ಅರಣ್ಯಗಳ/ವನ್ಯಜೀವಿ ಸಂಕುಲಗಳ ಕುರಿತು ಅವರ ದೃಷ್ಟಿಕೋನ ಬದಲಾಯಿಸಿ ಅರಣ್ಯಗಳ ಉಳಿವು ಮತ್ತು ಅಭಿವೃದ್ಧಿಯಲ್ಲಿ ಅವರನ್ನು ಪಾಲುದಾರರನ್ನಾಗಿ ಮಾಡುವುದು.
3. ಅರಣ್ಯಗಳ ಮಹತ್ವ ಅರಿತ ಒಬ್ಬ ನಾಗರಿಕ ಅರಣ್ಯ ಸಂರಕ್ಷಣೆ ಮತ್ತು ವನ್ಯಜೀವಿ ಸಂಕುಲಗಳ ಅಭಿವೃದ್ಧಿಯಲ್ಲಿ ತೊಡಗಿಸಿಕೊಂಡಲ್ಲಿ ಅರಣ್ಯ ಇಲಾಖೆಯ ಕೈ ಬಲಪಡಿಸಿದಂತಾಗುತ್ತದೆ. ಆದ್ದರಿಂದ ಒಬ್ಬ ಶಾಲಾ ವಿದ್ಯಾರ್ಥಿಯನ್ನು ಕಾಲೇಜು ಮೆಟ್ಟಿಲು ಹತ್ತುವ ಮುನ್ನ ತನ್ನ ವಿದ್ಯಾರ್ಥಿ ಜೀವನದಲ್ಲಿ ಕನಿಷ್ಠ ಒಮ್ಮೆಯಾದರೂ ಅರಣ್ಯಕ್ಕೆ ಭೇಟಿ ಮಾಡಿಸುವ ಮೂಲಕ ಅರಣ್ಯ ಮತ್ತು ವನ್ಯಜೀವಿಗಳ ಮಹತ್ವದ ಅರಿವನ್ನು ಮೂಡಿಸುವುದು.
4. ನೈಸರ್ಗಿಕ ಸಂಪತ್ತಾದ ಅರಣ್ಯವನ್ನು ಮತ್ತು ವನ್ಯಜೀವಿ ಸಂಕುಲವನ್ನು ಸಂರಕ್ಷಿಸುವಲ್ಲಿ ಅರಣ್ಯ ಇಲಾಖೆಯು ವಹಿಸುತ್ತಿರುವ ಪಾತ್ರ, ಕೈಗೊಳ್ಳುತ್ತಿರುವ ವಿವಿಧ ಕಾರ್ಯಗಳ ಕುರಿತು ಮಕ್ಕಳಿಗೆ ಅರಿವು ಮೂಡಿಸುವುದು.

**<u>II. ಯೋಜನೆಯ ರೂಪುರೇಷೆ :</u>**

ರಾಜ್ಯದಲ್ಲಿ ಒಟ್ಟು 14472 ಪ್ರೌಢ ಶಾಲೆಗಳಿದ್ದು, ಈ ಎಲ್ಲಾ ಶಾಲೆಗಳ 9ನೇ ತರಗತಿಯ ವಿದ್ಯಾರ್ಥಿಗಳಿಗೆ ಅವಕಾಶವನ್ನು ಕಲ್ಪಿಸುವುದು ಯೋಜನೆಯ ಮುಖ್ಯ ಉದ್ದೇಶ. ಆದರೆ ಎಲ್ಲಾ 9ನೇ ತರಗತಿ ವಿದ್ಯಾರ್ಥಿಗಳಿಗೆ ಅವಕಾಶವನ್ನು ಕಲ್ಪಿಸುವುದು ಕಷ್ಟವಾದುದರಿಂದ, ಈ ಯೋಜನೆಯನ್ನು ಹಂತ ಹಂತವಾಗಿ ಅನುಷ್ಠಾನಗೊಳಿಸಲು ಉದ್ದೇಶಿಸಿದೆ. ಮೊದಲನೆಯ ಹಂತವಾಗಿ ಸರ್ಕಾರಿ ಪ್ರಾಢಶಾಲೆಗಳಲ್ಲಿರುವ 9ನೇ ತರಗತಿಯ ವಿದ್ಯಾರ್ಥಿಗಳಿಗೆ ಅದರಲ್ಲೂ ಮೊದಲ ಹಂತದಲ್ಲಿ ವನ್ಯಜೀವಿ ತಾಣಗಳ ಹತ್ತಿರವಿರುವ ಶಾಲೆಗಳಿಗೆ ಈ ಯೋಜನೆಯ ಸೌಲಭ್ಯ ನೀಡಲು, ನಂತರದ ಹಂತದಲ್ಲಿ ರಕ್ಷಿತಾರಣ್ಯಗಳ ಹತ್ತಿರವಿರುವ ಸರ್ಕಾರಿ ಪ್ರೌಢ ಶಾಲೆಗಳಿಗೆ, ತದನಂತರ ಉಳಿದ ಸರ್ಕಾರಿ ಮತ್ತು ಅನುದಾನಿತ ಶಾಲೆಗಳಿಗೆ ವಿಸ್ತರಿಸುವ ಕ್ರಮ ತೆಗೆದುಕೊಳ್ಳಲಾಗುವುದು.

1. **ರಾಷ್ಟ್ರೀಯ ಉದ್ಯಾನವನ/ವನ್ಯಜೀವಿ ಅಭಯಾರಣ್ಯ ಪ್ರವಾಸಕ್ಕೆ ಬರುವ ವಿದ್ಯಾರ್ಥಿಗಳಿಗೆ ಈ ಕೆಳಕಂಡಂತೆ ಎರಡು ದಿನಗಳ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗುವುದು.**

ಈ ಯೋಜನೆಯಡಿ ಶಾಲಾ ವಿದ್ಯಾರ್ಥಿಗಳನ್ನು ಶಾಲೆಗಳಿಂದ ವನ್ಯಜೀವಿ ಅಭಯಾರಣ್ಯಗಳಿಗೆ ಸಂಬಂಧಪಟ್ಟಂತಹ ವಲಯ ಅರಣ್ಯ ಕಛೇರಿಗಳಿಗೆ ಭೇಟಿ, ನಂತರ ಅರಣ್ಯ ಪ್ರವೇಶ ಮತ್ತು ಹತ್ತಿರದ ಪ್ರಕೃತಿ ಶಿಬಿರಗಳಿಗೆ ಕರೆದೊಯ್ದು ಎರಡು ದಿನದ ಪ್ರವಾಸ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು, ಪ್ರಕೃತಿ ಶಿಬಿರಗಳಲ್ಲಿ ವಿದ್ಯಾರ್ಥಿಗಳಿಗೆ ಚಟುವಟಿಕೆಗಳ ಮುಖೇನ ಅರಣ್ಯ ಮತ್ತು ವನ್ಯಜೀವಿಗಳ ಕುರಿತು ಪರಿಚಯಿಸಿ ಅವುಗಳ ಮಹತ್ವದ ಕುರಿತು ಅರಿವು ಮೂಡಿಸುವಂತಹ ಸಾಕ್ಷ್ಯಚಿತ್ರಗಳನ್ನು ತೋರಿಸಲಾಗುವುದು. ಎರಡನೇ ದಿನ ಇಲಾಖಾ ವಾಹನ ಮುಖೇನ ಸಫಾರಿ ಹೊರಟು ಅರಣ್ಯದ ಬಗ್ಗೆ ಮತ್ತು ವನ್ಯಜೀವಿ ಸಂಕುಲಗಳ ಬಗ್ಗೆ ಮಾಹಿತಿ ನೀಡಿ ಅವುಗಳ ವೀಕ್ಷಣೆಗೆ ಅವಕಾಶ ಮತ್ತು ಅರಣ್ಯದಲ್ಲಿ ಚಾರಣಕ್ಕೆ ಮತ್ತು ಫಾಲ್ಸ್‌ಗಳ ವೀಕ್ಷಣೆಗೆ ಅವಕಾಶ ಕಲ್ಪಿಸುವುದು.

2. **ರಕ್ಷಿತಾರಣ್ಯಕ್ಕೆ ಪ್ರವಾಸಕ್ಕೆ ಬರುವ ವಿದ್ಯಾರ್ಥಿಗಳಿಗೆ ಈ ಕೆಳಕಂಡಂತೆ ಎರಡು ದಿನಗಳ ಕಾರ್ಯಕ್ರಮವನ್ನು ಹಮ್ಮಿಗೊಳ್ಳಲಾಗುವುದು.**

ಈ ಯೋಜನೆಯಡಿ ಶಾಲಾ ವಿದ್ಯಾರ್ಥಿಗಳನ್ನು ಶಾಲೆಗಳಿಂದ ಪ್ರಾದೇಶಿಕ ವಿಭಾಗದ ಅರಣ್ಯ ಪ್ರದೇಶದ ವಲಯ ಅರಣ್ಯ ಕಛೇರಿ ಭೇಟಿ, ತದನಂತರ ಅರಣ್ಯ ಪ್ರವೇಶ ಮತ್ತು ಹತ್ತಿರದ ಪ್ರಕೃತಿ ಶಿಬಿರಕ್ಕೆ ಕರೆದೊಯ್ದು ಎರಡು ದಿನದ ಪ್ರವಾಸ ಕಾರ್ಯಕ್ರಮ ಹಮ್ಮಿಕೊಳ್ಳಲಾಗುವುದು. ಮೊದಲನೇ ದಿನ ನೇಚರ್ ಕ್ಯಾಂಪ್‌ನಲ್ಲಿ ವಿದ್ಯಾರ್ಥಿಗಳಿಗೆ ಚಟುವಟಿಕೆಗಳ ಮುಖೇನ ಅರಣ್ಯ ಮತ್ತು ವನ್ಯಜೀವಿಗಳ ಕುರಿತು ಪರಿಚಯಿಸಿ ಅವುಗಳ ಮಹತ್ವದ ಕುರಿತು ಅರಿವು ಮೂಡಿಸುವಂತಹ ಸಾಕ್ಷ್ಯ ಚಿತ್ರಗಳನ್ನು ತೋರಿಸಲಾಗುವುದು. ಎರಡನೇ ದಿನ ಸಸ್ಯಕ್ಷೇತ್ರ, ದೈವೀವನ ಮತ್ತು ನಾಟಾ ಸಂಗ್ರಹಾಲಯಕ್ಕೆ ಕರೆದುಕೊಂಡು ಹೋಗಿ ಮಾಹಿತಿಯನ್ನು ನೀಡಲಾಗುವುದು.

III. ಪ್ರವಾಸ ಮುಗಿದ ಮೇಲೆ ಈ ಕೆಳಗಿನ ಚಟುವಟಿಕೆಗಳನ್ನು ಶಾಲೆಯುಲ್ಲಿ ಹಮ್ಮಿಕೊಳ್ಳಲು ಸೂಚಿಸಿ ಮಾರ್ಗದರ್ಶನ ನೀಡಲಾಗುವುದು.

- ಶಾಲೆಯ ಆವರಣದಲ್ಲಿರುವ ಸಸ್ಯಗಳ ಪಟ್ಟಿ ಮಾಡುವುದು.
- ಪ್ರತಿ ಮಗುವಿಗೆ ಒಂದು ಸಸಿ ನೀಡಿ ಶಾಲೆಯ ಆವರಣದಲ್ಲಿ ಬೆಳೆಸಲು ಪ್ರೋತ್ಸಾಹಿಸುವುದು. ಒಂದು ವೇಳೆ ಶಾಲೆಯಲ್ಲಿ ಸ್ಥಳದ ಅಭಾವವಿದ್ದಲ್ಲಿ, ಮೂಲಿಕೆ ಸಸಿಗಳನ್ನು ನೀಡಿ ಕುಂಡಗಳಲ್ಲಿ ಬೆಳೆಸಲು ಪ್ರೋತ್ಸಾಹಿಸುವುದು.
- ಶಾಲಾ ಆವರಣದಲ್ಲಿ ಬರುವ ಚಿಟ್ಟೆಗಳು, ಪಕ್ಷಿಗಳ ಪಟ್ಟಿ ಮಾಡುವುದು.
- ಪ್ರವಾಸದ ಕುರಿತು ಪ್ರಬಂಧ ಅಥವಾ ಕಥನ ಸ್ಪರ್ಧೆ ಏರ್ಪಡಿಸುವುದು.
- ಪ್ರವಾಸದ ಕುರಿತು ಚಿತ್ರಕಲಾ ಸ್ಪರ್ಧೆ ಏರ್ಪಡಿಸುವುದು.
- ಶಾಲಾ ಆವರಣದಲ್ಲಿ ಪಕ್ಷಿಗಳಿಗೆ ಗೂಡು ಕಟ್ಟಲು ಆವಾಸ ನಿರ್ಮಿಸುವುದು.

IV. ಈ ಯೋಜನೆಯ ಅನುಷ್ಠಾನಕ್ಕೆ 2015-16ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ₹. 200.00 ಲಕ್ಷಗಳ ಅನುದಾನದಲ್ಲಿ 20 ಶಾಲೆಗಳಿಗೆ ಒಂದು ಕ್ಯಾಂಪ್‌ನಂತೆ ಅನುಷ್ಠಾನಗೊಳಿಸುವುದು.

V. ಈ ಯೋಜನೆಯ ಅನುಷ್ಠಾನಕ್ಕೆ ಅರಣ್ಯ ಇಲಾಖೆಯಲ್ಲಿ ಪ್ರಸ್ತುತ ಹುಲಿ ಸಂರಕ್ಷಿತದ ಪ್ರದೇಶ/ರಾಷ್ಟ್ರೀಯ ಉದ್ಯಾನವನ/ರಕ್ಷಿತಾರಣ್ಯ ಪ್ರದೇಶಗಳಲ್ಲಿ ಸ್ಥಾಪಿಸಲ್ಪಟ್ಟ "ಪ್ರಕೃತಿ ಶಿಬಿರ"ಗಳಲ್ಲಿ ಕಾರ್ಯಕ್ರಮಗಳನ್ನು ಹಮ್ಮಿಗೊಳ್ಳಲಿದ್ದು, ವನದರ್ಶನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಆಯ್ಕೆ ಮಾಡಿದ ಪ್ರದೇಶಗಳ ಪಟ್ಟಿ ಈ ರೀತಿ ಇದೆ.

| ಕ್ರಮಸಂಖ್ಯೆ | ಪ್ರದೇಶಗಳ ಹೆಸರು | ಕ್ರಮ ಸಂಖ್ಯೆ | ಪ್ರದೇಶಗಳ ಹೆಸರು |
|---|---|---|---|
| 1 | ಬಂಡೀಪುರ ಹುಲಿ ಸಂರಕ್ಷಿತ ಪ್ರದೇಶ | 9 | ಸೀತಾನದಿ ಪ್ರಕೃತಿ ಶಿಬಿರ |
| 2 | ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶ | 10 | ಆನೆಝುರಿ ಪ್ರಕೃತಿ ಶಿಬಿರ |
| 3 | ಅಣಶಿ ಪ್ರಕೃತಿ ಶಿಬಿರ | 11 | ಮುಪ್ಪಾಣೆ |
| 4 | ಕುಳಗಿ ಪ್ರಕೃತಿ ಶಿಬಿರ | 12 | ಬೀಮಗಡ |
| 5 | ಗೋಪಿನಾಥಮ್ | 13 | ಗುಂಡ್ಯ |
| 6 | ಸಕ್ಕರೆಬೈಲು | 14 | ನಿಸರ್ಗಧಾಮ, ಕುಶಾಲನಗರ |
| 7 | ಚಕ್ರ | 15 | ಬಿಳಿಗಿರಿರಂಗನ ಬೆಟ್ಟ |
| 8 | ಭಗವತಿ ಪ್ರಕೃತಿ ಶಿಬಿರ | 16 | ಮುತ್ತೋಡಿ |

2. ಈ ಯೋಜನೆಗೆ ತಗಲುವ ವೆಚ್ಚವನ್ನು 2406-01-102-2-25-103 (ಯೋಜನೆ) ಇದರಡಿ ಒದಗಿಸಿರುವ ₹. 200.00 ಲಕ್ಷದ (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ)ಗಳಲ್ಲಿ ಭರಿಸತಕ್ಕದ್ದು.
3. ಸದರಿ ಯೋಜನೆಯ ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಹಾಗೂ ನಿಯಮಗಳು, 2000 ರನ್ವಯ ನಿರ್ವಹಿಸತಕ್ಕದ್ದು.
4. ಸದರಿ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ/28/ಪಿಎಫ್‌ಒ/ 2015 ದಿನಾಂಕ: 16.06.2015 ಮತ್ತು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 481 ವೆಚ್ಚ-5/2015, ದಿನಾಂಕ: 17.6.2015 ರಲ್ಲಿ ನೀಡಿದ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 501

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.
(ವನ್ಯಜೀವಿ, ನಿಗಮ ಮತ್ತು ಯೋಜನೆಗಳು)

## ಅರಣ್ಯ , ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ರಾಜ್ಯದ ಹುಲಿ ಸಂರಕ್ಷಿತ ಪ್ರದೇಶ, ವನ್ಯಜೀವಿಧಾಮ ಹಾಗೂ ರಾಷ್ಟ್ರೀಯ ಉದ್ಯಾನವನದಲ್ಲಿನ ಅರಣ್ಯವಾಸಿಗಳನ್ನು ಸ್ಥಳಾಂತರಿಸಲು ಹಾಗೂ ಪುನರ್ವಸತಿ ಕಲ್ಪಿಸುವ ಕಾರ್ಯಕ್ರಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಕೈಗೊಳ್ಳಲು "ಪುನರ್ವಸತಿ ಘಟಕ" ಸ್ಥಾಪಿಸುವ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಪಮು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ: ಪಿಸಿಸಿಎಫ್ (ಅಪಮು) ಡಿ-1/ಬಿಯುಡಿ/ಸಿಆರ್-62/2015-16, ದಿನಾಂಕ: 04.05.2015.

**ಪ್ರಸ್ತಾವನೆ :**

ರಾಜ್ಯದ ರಕ್ಷಿತ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವ ಕುಟುಂಬಗಳನ್ನು ಹೊರಗಡೆ ಸ್ಥಳಾಂತರಿಸಿ ಅವರಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಮತ್ತು ಹುಲಿ/ಆನೆ ಮೊಗಸಾಲೆಯ ಜೋಡನೆಗೆ ಸಂಬಂಧಪಟ್ಟಂತೆ ಇಡುವಳಿ ಜಮೀನುದಾರರು ಸ್ವ-ಇಚ್ಛೆಯಿಂದ ಜಮೀನನ್ನು ನೀಡಿದ್ದಲ್ಲಿ ಅಂತಹ ಜಮೀನುಗಳ ಭೂಸ್ವಾಧೀನ ಪ್ರಕ್ರಿಯೆಗೆ ಅನುಕೂಲವಾಗುವಂತೆ ಹುಲಿ ಸಂರಕ್ಷಿತ ಪ್ರದೇಶ, ವನ್ಯಜೀವಿಧಾಮ ಹಾಗೂ ರಾಷ್ಟ್ರೀಯ ಉದ್ಯಾನವನದಲ್ಲಿನ ಅರಣ್ಯವಾಸಿಗಳನ್ನು ಸ್ಥಳಾಂತರಿಸಲು ಹಾಗೂ ಪುನರ್ವಸತಿ ಕಲ್ಪಿಸುವ ಕಾರ್ಯಕ್ರಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಕೈಗೊಳ್ಳಲು "ಪುನರ್ವಸತಿ ಘಟಕ" ಸ್ಥಾಪಿಸಲು ಸರ್ಕಾರವು 2015-16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆ ಮಾಡಿದೆ.

ಮೇಲೆ ಓದಲಾದ ದಿನಾಂಕ: 04.05.2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು 2015-16ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಪ್ರಸ್ತಾಪಿಸಿರುವಂತೆ ಹುಲಿ ಸಂರಕ್ಷಿತ ಪ್ರದೇಶ, ವನ್ಯಜೀವಿಧಾಮ ಹಾಗೂ ರಾಷ್ಟ್ರೀಯ ಉದ್ಯಾನವನದಲ್ಲಿನ ಅರಣ್ಯವಾಸಿಗಳನ್ನು ಸ್ಥಳಾಂತರಿಸಲು ಹಾಗೂ ಪುನರ್ವಸತಿ ಕಲ್ಪಿಸುವ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕೈಗೊಳ್ಳಲು "ಪುನರ್ವಸತಿ ಘಟಕ ಸ್ಥಾಪನೆ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸಲು ಹಾಗೂ ಲೆಕ್ಕ ಶೀರ್ಷಿಕೆ "2406-01-001-1-01-59" ಇದರಡಿ ಒದಗಿಸಿರುವ ₹. 50.00 ಲಕ್ಷದ ಮಿತಿಯಲ್ಲಿ ಪುನರ್ವಸತಿ ಘಟಕ ಸ್ಥಾಪನೆ ಯೋಜನೆಯನ್ನು ಅನುಷ್ಟಾನಗೊಳಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 89 ಎಫ್‌ಎಪಿ 2015, ಬೆಂಗಳೂರು, ದಿನಾಂಕ : 15.07.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದ ಹುಲಿ ಸಂರಕ್ಷಿತ ಪ್ರದೇಶ, ವನ್ಯಜೀವಿಧಾಮ ಹಾಗೂ ರಾಷ್ಟ್ರೀಯ ಉದ್ಯಾನವನದಲ್ಲಿನ ಅರಣ್ಯವಾಸಿಗಳನ್ನು ಸ್ಥಳಾಂತರಿಸಲು ಹಾಗೂ ಪುನರ್ವಸತಿ ಕಲ್ಪಿಸುವ ಕಾರ್ಯಕ್ರಮವನ್ನು ಹೆಚ್ಚು ಪರಿಣಾಮಕಾರಿಯಾಗಿ ಕೈಗೊಳ್ಳಲು "ಪುನರ್ವಸತಿ ಘಟಕ ಸ್ಥಾಪನೆ" ಎಂಬ ಯೋಜನೆಯನ್ನು 2015-16ನೇ ಸಾಲಿನಿಂದ ಕೆಳಕಂಡ ಮಾರ್ಗಸೂಚಿಗಳೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

**ಯೋಜನೆಯ ಉದ್ದೇಶ:**

ಕರ್ನಾಟಕ ರಾಜ್ಯವು 5 ಹುಲಿ ಸಂರಕ್ಷಿತ ಪ್ರದೇಶ, 7 ವನ್ಯಜೀವಿ ವಿಭಾಗಗಳನ್ನು ಹೊಂದಿದ್ದು, ಆ ರಕ್ಷಿತಾರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಕುಟುಂಬಗಳಿಗೆ ಮೂಲಭೂತ ಸೌಕರ್ಯಗಳನ್ನು ಅರಣ್ಯ ಪ್ರದೇಶದಲ್ಲಿ ಕಲ್ಪಿಸಲು ಕಾನೂನಿನ ಅಡಚಣೆ ಇರುವುದರಿಂದ ಹಾಗೂ ವನ್ಯಪ್ರಾಣಿಗಳ ಹಾವಳಿಯಿಂದ ರಕ್ಷಿಸುವ ದೃಷ್ಠಿಯಿಂದ ಸ್ವ-ಇಚ್ಛೆ ಮೇರೆಗೆ ರಕ್ಷಿತಾರಣ್ಯ ಪ್ರದೇಶದಿಂದ ಹೊರಬರಲು ಇಚ್ಛಿಸಿ ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ ಅಂತಹ ಕುಟುಂಬಗಳಿಗೆ ಪುನರ್ವಸತಿ ಮತ್ತು ಪುನರ್ ವ್ಯವಸ್ಥೆ ಕಲ್ಪಿಸಿ ಸಮಾಜದ ಮುಖ್ಯವಾಹಿನಿಗೆ ತರುವುದೇ ಮೂಲ ಉದ್ದೇಶವಾಗಿದೆ ಅಲ್ಲದೆ, ಹುಲಿ/ ಆನೆಗಳ ಮೊಗಸಾಲೆಯ ಜೋಡಣೆಗೆ ಸಂಬಂಧಪಟ್ಟಂತೆ ಹಿಡುವಳಿ ಜಮಿನುದಾರರು ಸ್ವ-ಇಚ್ಛೆ ಮೇರೆಗೆ ಜಮೀನನ್ನು ಇಲಾಖೆಗೆ ನೀಡಲು ಇಚ್ಛಿಸಿದ್ದಲ್ಲಿ ಅಂತಹ ಜಮೀನುಗಳ ಭೂ-ಸ್ವಾಧೀನ ಪ್ರಕ್ರಿಯೆಗೆ ಪುನರ್ವಸತಿ ಮತ್ತು ಪುನರ್ ವ್ಯವಸ್ಥೆ ಯೋಜನೆಯಡಿಯಲ್ಲಿ ಕ್ರಮ ಕೈಗೊಳ್ಳಲಾಗುವುದು.

**ಅನುಷ್ಟಾನದ ವಿಧಾನ:**

1. ಅರಣ್ಯ ಇಲಾಖೆಯ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ)ರವರ ಅಧೀನದಲ್ಲಿ ಜಿಲ್ಲಾ ಮಟ್ಟದಲ್ಲಿ ಭೂ-ಸ್ವಾಧೀನ /ಮೌಲ್ಯಮಾಪನ /ಪುನರ್ವಸತಿ ಮತ್ತು ಪುನರ್‌ವ್ಯವಸ್ಥೆಯನ್ನು ನೋಡಿಕೊಳ್ಳಲು 4 ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್/ ಉಪ ವಿಭಾಗ ಅಧಿಕಾರಿ) ಹುದ್ದೆಗಳನ್ನು ಬೆಂಗಳೂರು, ಮೈಸೂರು, ಮಂಗಳೂರು ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ವಲಯ ಕಛೇರಿಗಳಾಗಿ ಸೃಜಿಸುವುದು.
2. ಅರಣ್ಯ ಇಲಾಖೆಯ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ) ರವರ ಅಧೀನದಲ್ಲಿ ಜಿಲ್ಲಾ ಮಟ್ಟದಲ್ಲಿ ಭೂ-ಸ್ವಾಧೀನ/ಮೌಲ್ಯಮಾಪನ/ಪುನರ್ವಸತಿ ಮತ್ತು ಪುನರ್ ವ್ಯವಸ್ಥೆಯನ್ನು ನೋಡಿಕೊಳ್ಳಲು ಸೃಜಿಸಲಾದ 4 ವಿಶೇಷ ಅಧಿಕಾರಿಗಳಿಗೆ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) ಸಂಬಂಧಪಟ್ಟ ರಕ್ಷಿತಾರಣ್ಯ ಪ್ರದೇಶ ನಿರ್ದೇಶಕರುಗಳು /ಪುನರ್ವಸತಿ ಮತ್ತು ಪುನರ್ ವ್ಯವಸ್ಥೆಗೆ ಸಂಬಂಧಪಟ್ಟಂತಹ ಎಲ್ಲ ಕಡತ/ದಾಖಲೆಗಳನ್ನು (ಕೇಂದ್ರ ಮತ್ತು ರಾಜ್ಯ ಸರ್ಕಾರದ ಆದೇಶದ ಪ್ರತಿ) ಒದಗಿಸುವುದು.
3. ಪುನರ್ವಸತಿ ಮತ್ತು ಪುನರ್ ವ್ಯವಸ್ಥೆ ಘಟಕವು ಅಸ್ತಿತ್ವಕ್ಕೆ ಬಂದ ಮೇಲೆ ವಿಶೇಷ ಅಧಿಕಾರಿಯವರು (ವಿಶೇಷ ತಹಶೀಲ್ದಾರ್ / ಉಪ ವಿಭಾಗಾಧಿಕಾರಿ) ಸಂಬಂಧಪಟ್ಟ ಜಿಲ್ಲಾಧಿಕಾರಿಯವರೊಂದಿಗೆ, ಅರಣ್ಯ ಇಲಾಖೆಯ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಮುಖ್ಯಸ್ಥರು, ಅರಣ್ಯ ಪಡೆ)/ಸಂಬಂಧಪಟ್ಟ ಅರಣ್ಯಾಧಿಕಾರಿಗಳೊಂದಿಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಕಾಲಕಾಲಕ್ಕೆ ಹೊರಡಿಸುವ ಮಾರ್ಗಸೂಚಿ/ಆದೇಶಗಳಂತೆ ಯೋಜನೆಯನ್ನು ಅನುಷ್ಟಾನಗೊಳಿಸತಕ್ಕದ್ದು.
4. ಕಂದಾಯ ಮತ್ತು ಅರಣ್ಯ ಇಲಾಖೆಯ ನಡುವೆ ಸಮನ್ವಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ರಾಜ್ಯ ಅರಣ್ಯ ಸೇವೆಯ ಎರಡು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಹುದ್ದೆಯನ್ನು ಮೈಸೂರು ಮತ್ತು ಬೆಳಗಾವಿನಲ್ಲಿ ಸೃಜಿಸುವುದು. (ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ)ಯ ನಿರ್ದೇಶನದಂತೆ ಕಛೇರಿಯ ಸಿಬ್ಬಂದಿಯೊಂದಿಗೆ ಕರ್ತವ್ಯವನ್ನು ನಿರ್ವಹಿಸಬೇಕಾಗುತ್ತದೆ.
5. ಜಿಲ್ಲಾ ಮಟ್ಟದಲ್ಲಿ ಭೂ-ಸ್ವಾಧೀನ /ಮೌಲ್ಯಮಾಪನ/ಪುನರ್ವಸತಿ ಮತ್ತು ಪುನರ್‌ವ್ಯವಸ್ಥೆಯನ್ನು ನೋಡಿಕೊಳ್ಳಲು ವಿಶೇಷ ಅಧಿಕಾರಿ(ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ)ಯವರ ವಲಯ ಕಛೇರಿಯನ್ನು ಬೆಂಗಳೂರು, ಮೈಸೂರು, ಮಂಗಳೂರು ಮತ್ತು ಬೆಳಗಾವಿ ಜಿಲ್ಲೆಗಳಲ್ಲಿ ತೆರೆಯುವುದು.

ಅ) ಕರ್ನಾಟಕ ಅರಣ್ಯ ಇಲಾಖೆಯಲ್ಲಿ ನಿಯೋಜನೆ ಮೇಲೆ ವಿಶೇಷ ಅಧಿಕಾರಿಯು (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) ಕರ್ತವ್ಯ ನಿರ್ವಹಿಸಲು ಕಂದಾಯ ಇಲಾಖೆಯ ಅನುಮತಿ ಪಡೆಯುವುದು.

ಆ) 4 ವಿಶೇಷ ಅಧಿಕಾರಿಗಳಿಗೆ (ವಿಶೇಷ ತಹಶೀಲ್ದಾರ್ /ಉಪ ವಿಭಾಗಾಧಿಕಾರಿ) ಮತ್ತು 2 ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಕ್ಷೇತ್ರ ತಪಾಸಣೆಗೆ ₹.6.50 ಲಕ್ಷಗಳ ಮೌಲ್ಯದ (ಬೋಲೋರೋ) ವಾಹನ ಖರೀದಿಸಲು ಅನುಮೋದನೆ ನೀಡುವುದು.

ಇ) 4 ಜಿಲ್ಲಾ ಮಟ್ಟದ ವಲಯ ಕಛೇರಿಯಲ್ಲಿ ಒಂದು ಮ್ಯಾನೇಜರ್ ಹುದ್ದೆ, ಒಂದು ಪ್ರಥಮ ದರ್ಜೆ ಸಹಾಯಕರ ಹುದ್ದೆ ಮತ್ತು ಎರಡು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ಸೃಜಿಸಲಾಗುವುದು.

ಈ) 4 ಜಿಲ್ಲಾ ಮಟ್ಟದ ವಲಯ ಕಛೇರಿಯಲ್ಲಿ ಮತ್ತು computer operator attender ಗಳನ್ನು ವಿಶೇಷ ಅಧಿಕಾರಿಯವರು (ವಿಶೇಷ ತಹಶೀಲ್ದಾರ್/ಉಪ ವಿಭಾಗ ಅಧಿಕಾರಿ) ಹೊರ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಿಕೊಳ್ಳಬಹುದು.

ಉ) ಜಿಲ್ಲಾ ಮಟ್ಟದಲ್ಲಿ ಸೃಜಿಸುವ 4 ವಲಯ ಮತ್ತು ಅವುಗಳ ಕಾರ್ಯವ್ಯಾಪ್ತಿ ಈ ಕೆಳಕಂಡಂತಿದೆ.

a) **ಬೆಂಗಳೂರು ವಲಯ:** ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) (ಬೆಂಗಳೂರು/ರಾಮನಗರ ಮತ್ತು ಹಾಸನ ಜಿಲ್ಲೆಗಳ ಉಸ್ತುವಾರಿ)

b) **ಮೈಸೂರು ವಲಯ:** ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) (ಮೈಸೂರು/ಕೊಡಗು/ಚಾಮರಾಜನಗರ ಜಿಲ್ಲೆಗಳ ಉಸ್ತುವಾರಿ)

c) **ಮಂಗಳೂರು ವಲಯ:** ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) (ಮಂಗಳೂರು/ಉಡುಪಿ/ಚಿಕ್ಕಮಗಳೂರು ಜಿಲ್ಲೆಗಳ ಉಸ್ತುವಾರಿ)

d) **ಬೆಳಗಾವಿ ವಲಯ:** ವಿಶೇಷ ಅಧಿಕಾರಿ (ವಿಶೇಷ ತಹಶೀಲ್ದಾರ್ /ಉಪ ವಿಭಾಗ ಅಧಿಕಾರಿ) (ಉತ್ತರ ಕನ್ನಡ/ಬೆಳಗಾವಿ/ಕಲಬುರಗಿ/ಶಿವಮೊಗ್ಗ ಜಿಲ್ಲೆಗಳ ಉಸ್ತುವಾರಿ)

2. 2015–16ನೇ ಸಾಲಿನಲ್ಲಿ ಈ ಯೋಜನೆಗೆ ತಗಲುವ ವೆಚ್ಚವನ್ನು **"2406–01–001–1–01–59"** (ಯೋಜನೇತರ) ರಡಿ ಒದಗಿಸುವ ₹. 50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳಲ್ಲಿ ಭರಿಸತಕ್ಕದ್ದು.

3. ಸದರಿ ಆದೇಶವನ್ನು ಯೋಜನಾ ಇಲಾಖೆಯ ಹಾಗೂ ಆರ್ಥಿಕ ಇಲಾಖೆಗಳು ಕ್ರಮವಾಗಿ ಟಿಪ್ಪಣಿ ಸಂಖ್ಯೆ: ಪಿಡಿ/27/ಪಿಎಫ್/ಒ/2015 ದಿನಾಂಕ: 26.05.2015 ಮತ್ತು ಟಿಪ್ಪಣಿ ಸಂಖ್ಯೆ: ಆಇ 480 ವೆಚ್ಚ–5/2015, ದಿನಾಂಕ: 17.06.2015ರ ನೀಡಿರುವ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 502**

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಡಿಪಿಎಆರ್ 114 ಹೆಚ್‌ಜಿಜಿ 2015 ಬೆಂಗಳೂರು, ದಿನಾಂಕ: 29.07.2015.**

ಕರ್ನಾಟಕ ರಾಜ್ಯಕ್ಕೆ ಭೇಟಿ ನೀಡುವ ಗಣ್ಯ ವ್ಯಕ್ತಿಗಳಿಗೆ ರಾಜ್ಯ ಅತಿಥ್ಯವನ್ನು ನೀಡುವ ಮಾರ್ಗಸೂಚಿ ಆದೇಶ ಸಂಖ್ಯೆ: ಸಿಆಸುಇ 554 ಹೆಚ್‌ಜಿಜಿ 2005, ದಿನಾಂಕ: 22.04.2006ರ ಮೂಲಕ ಹೊರಡಿಸಿದೆ. ಸದರಿ ಮಾರ್ಗಸೂಚಿಯಲ್ಲಿ ಕ್ರಮ ಸಂಖ್ಯೆ: 3(ಎ)ರಲ್ಲಿ ಈ ಮುಂದೆ ಹೇಳಿರುವ ಗಣ್ಯರು ಅಧಿಕೃತ ಕರ್ತವ್ಯದ ಮೇಲೆ ರಾಜ್ಯಕ್ಕೆ ಭೇಟಿ ನೀಡಿದಾಗಲೆಲ್ಲ ಅವರನ್ನು ರಾಜ್ಯ ಅತಿಥಿಗಳೆಂದು ಪರಿಗಣಿಸಲಾಗುವುದು ಎಂಬ ಉಪ ಶೀರ್ಷಿಕೆಯ ಕ್ರಮ ಸಂಖ್ಯೆ: 4ರಲ್ಲಿ ಹೆಸರಿಸಲಾದ **"ಯೋಜನಾ ಆಯೋಗದ ಉಪಾಧ್ಯಕ್ಷರು ಮತ್ತು ಸದಸ್ಯರುಗಳು"** ಎಂಬುದರ ಬದಲಾಗಿ **"NITI ಆಯೋಗದ ಉಪಾಧ್ಯಕ್ಷ ಹಾಗೂ ಸದಸ್ಯರುಗಳು"** ಎಂದು ಸೇರಿಸಲಾಗಿದೆ.

ಈ ಸೇರ್ಪಡೆ ಆದೇಶವನ್ನು ಕೇಂದ್ರ ಸರ್ಕಾರದ ಆದೇಶ ಸಂಖ್ಯೆ: 1/51/1/2015– Cab ದಿನಾಂಕ: 15ನೇ ಜನವರಿ 2015ರನ್ವಯ ಯೋಜನಾ ಆಯೋಗವನ್ನು ರದ್ದುಪಡಿಸಿ ಹೊಸದಾಗಿ ನೀತಿ ಆಯೋಗವನ್ನು ರಚಿಸಿದ ಹಿನ್ನೆಲೆಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.503**
**SC-200**

**ಡಾ॥ ಬಿ.ಎಸ್. ಮಂಜುನಾಥ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ರಾಜ್ಯ ಶಿಷ್ಟಾಚಾರ)

## ಕಂದಾಯ ಸಚಿವಾಲಯ

**ವಿಷಯ :** ರಾಜ್ಯ ಧಾರ್ಮಿಕ ಪರಿಷತ್ತಿನ ಕಾಲಾವಧಿಯನ್ನು ಹಾಗೂ ನ್ಯಾಯಿಕ ಸದಸ್ಯರ ನೇಮಕಾತಿ ಅವಧಿಯನ್ನು ವಿಸ್ತರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011 ದಿನಾಂಕ: 13.07.2011.
2. ಸರ್ಕಾರದ ಆದೇಶ ಸಂಖ್ಯೆ: ಕಂಇ 59 ಮುಸೇವಿ 2014 ದಿನಾಂಕ: 19.09.2014.
3. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪತ್ರ ಸಂಖ್ಯೆ: ಎಡಿಎಂ/08/ಸಿಆರ್/53/2014–15 ದಿನಾಂಕ: 12.03.2015.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (ತಿದ್ದುಪಡಿ) ಕಾಯ್ದೆ 2011ರ ಸೆಕ್ಷನ್ 20ರಂತೆ ರಾಜ್ಯ ಧಾರ್ಮಿಕ ಪರಿಷತ್ತನ್ನು 3 ವರ್ಷಗಳ ಅವಧಿಗೆ ರಚಿಸಿ ಆದೇಶಿಸಲಾಗಿರುತ್ತದೆ. ಮುಂದುವರೆದು, ಮೇಲೆ ಓದಲಾದ (2) ರ ಸರ್ಕಾರದ ಆದೇಶದಲ್ಲಿ, ರಾಜ್ಯ ಧಾರ್ಮಿಕ ಪರಿಷತ್ತಿನ ಸದಸ್ಯರನ್ನಾಗಿ ಶ್ರೀ ಮಹಿಪಾಲ್ ದೇಸಾಯಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ರಾಜ್ಯ ಧಾರ್ಮಿಕ ಪರಿಷತ್ತಿನ ನ್ಯಾಯಿಕ ಸದಸ್ಯರನ್ನಾಗಿ ಮುಂದಿನ 04 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕ ಮಾಡಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ ಓದಲಾದ (3)ರ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ ಕಂಇ 61 ಮುಇವಿ 2013 ದಿನಾಂಕ: 04.07.2013ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತಿನ ನಾಮ ನಿರ್ದೇಶಿತ ಸದಸ್ಯರುಗಳ ಸದಸ್ಯತ್ವವನ್ನು ಹಿಂಪಡೆಯಲಾಗಿರುತ್ತದೆ. ಆದರೆ, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (2ನೇ ತಿದ್ದುಪಡಿ) ಕಾಯ್ದೆ 2011 ದಿನಾಂಕ: 05.03.2012ರಿಂದ ಜಾರಿಗೆ ಬಂದಿದ್ದು, ಸದರಿ ತಿದ್ದುಪಡಿ ಕಾಯ್ದೆಯ ಸೆಕ್ಷನ್ 20(1)(ಡಿ)ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತಿನ ಅವಧಿಯನ್ನು **ಮೂರು ವರ್ಷಗಳ** ಬದಲಿಗೆ **ನಾಲ್ಕು ವರ್ಷಗಳು** ಎಂದು ತಿದ್ದುಪಡಿ ಮಾಡಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಕಂಇ 61 ಮುಇವಿ 2013, ದಿನಾಂಕ: 04.07.2013 ರಲ್ಲಿ ಹಿಂಪಡೆಯಲಾದ ನಾಮ ನಿರ್ದೇಶಿತ ಸದಸ್ಯರುಗಳ ಹೆಸರುಗಳನ್ನು ಹೊರತುಪಡಿಸಿ:

ರಾಜ್ಯ ಧಾರ್ಮಿಕ ಪರಿಷತ್ತಿನ ಪ್ರಸ್ತುತ ನ್ಯಾಯಿಕ ಸದಸ್ಯರ ನೇಮಕಾತಿ ಆದೇಶದ ದಿನಾಂಕವನ್ನು ಒಳಗೊಂಡಂತೆ; ಹಾಗೂ

ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011 ದಿನಾಂಕ: 13.07.2011ರ ಆದೇಶದಲ್ಲಿನ ರಾಜ್ಯ ಧಾರ್ಮಿಕ ಪರಿಷತ್ತಿನ ಕಾಲಾವಧಿಯನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (2ನೇ ತಿದ್ದುಪಡಿ) ಕಾಯ್ದೆ 2011 ದಿನಾಂಕ: 05.03.2012 ರಿಂದ ದಿನಾಂಕ: 05.03.2012 ರಿಂದ ಜಾರಿಗೆ ಬಂದಿರುವ ಹಿನ್ನೆಲೆಯಲ್ಲಿ ಸದರಿ ತಿದ್ದುಪಡಿ ಕಾಯ್ದೆಯ ಸೆಕ್ಷನ್ 20(1)(ಡಿ)ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತಿನ ಅವಧಿಯನ್ನು ಮೂರು ವರ್ಷಗಳ ಬದಲಿಗೆ ನಾಲ್ಕು ವರ್ಷಗಳು ಎಂದು ತಿದ್ದುಪಡಿ ಮಾಡಿರುವ ಹಿನ್ನೆಲೆಯಲ್ಲಿ ಸದರಿ ತಿದ್ದುಪಡಿಯನ್ವಯ ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011 ದಿನಾಂಕ: 13.07.2011 ರಿಂದ 03 ವರ್ಷಗಳ ನಂತರ ಅಂದರೆ, ದಿನಾಂಕ: 13.07.2014 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಂಇ 61 ಮುಇವಿ 2013 ದಿನಾಂಕ: 04.07.2013ರ ಆದೇಶದಲ್ಲಿ ಹಿಂಪಡೆಯಲಾದ ನಾಮ ನಿರ್ದೇಶಿತ ಸದಸ್ಯರುಗಳ ಹೆಸರುಗಳನ್ನು ಹೊರತುಪಡಿಸಿ ಹಾಗೂ ರಾಜ್ಯ ಧಾರ್ಮಿಕ ಪರಿಷತ್ತಿನ ನ್ಯಾಯಿಕ ಸದಸ್ಯರ ನೇಮಕಾತಿ ಆದೇಶದ ದಿನಾಂಕದಿಂದ ಇವರನ್ನು ಒಳಗೊಂಡಂತೆ ಒಂದು ವರ್ಷದ ಅವಧಿಗೆ ವಿಸ್ತರಿಸಿ, ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಕಂಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 36 ಮುಸೇವಿ 2015, ಬೆಂಗಳೂರು, ದಿನಾಂಕ 18ನೇ ಮಾರ್ಚ್, 2015.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಆದೇಶ ಸಂಖ್ಯೆ: ಕಂಇ 79 ಮುಸೇವಿ 2011 ದಿನಾಂಕ: 13.07.2011ರ ಆದೇಶದಲ್ಲಿನ ರಾಜ್ಯ ಧಾರ್ಮಿಕ ಪರಿಷತ್ತಿನ ಕಾಲಾವಧಿಯನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ (2ನೇ ತಿದ್ದುಪಡಿ)ಕಾಯ್ದೆ 2011 ದಿನಾಂಕ: 05.03.2012 ರಿಂದ ಜಾರಿಗೆ ಬಂದಿರುವ ಸಂಬಂಧ ಸದರಿ ತಿದ್ದುಪಡಿ ಕಾಯ್ದೆಯ ಸೆಕ್ಷನ್ 20(1) (ಡಿ)ರಲ್ಲಿ ರಾಜ್ಯ ಧಾರ್ಮಿಕ ಪರಿಷತ್ತಿನ ಅವಧಿಯನ್ನು ಮೂರು ವರ್ಷಗಳ ಬದಲಿಗೆ ನಾಲ್ಕು ವರ್ಷಗಳು ಎಂದು ತಿದ್ದುಪಡಿ ಮಾಡಿರುವ ಹಿನ್ನೆಲೆಯಲ್ಲಿ, ಸದರಿ ತಿದ್ದುಪಡಿಯನ್ವಯ ಸರ್ಕಾರದ ಆದೇಶ ಸಂಖ್ಯೆ: ಕಂಇ 79 ಮುಸೇವಿ 2011 ದಿನಾಂಕ: 13.07.2011 ರಿಂದ 03 ವರ್ಷಗಳ ನಂತರ ಅಂದರೆ, ದಿನಾಂಕ: 13.07.2014 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಕಂಇ 61 ಮುಇವಿ 2013 ದಿನಾಂಕ: 04.07.2013ರ ಆದೇಶದಲ್ಲಿ ಹಿಂಪಡೆಯಲಾದ ನಾಮ ನಿರ್ದೇಶಿತ ಸದಸ್ಯರುಗಳ ಹೆಸರುಗಳನ್ನು ಹೊರತುಪಡಿಸಿ ಹಾಗೂ ರಾಜ್ಯ ಧಾರ್ಮಿಕ ಪರಿಷತ್ತಿನ ನ್ಯಾಯಿಕ ಸದಸ್ಯರ ನೇಮಕಾತಿ ಆದೇಶದ ದಿನಾಂಕದಿಂದ ಇವರನ್ನು ಒಳಗೊಂಡಂತೆ ಒಂದು ವರ್ಷದ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R.505
SC-25

ಸಿ.ಟಿ. ಜಯರಾಮೇಗೌಡ
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

### ಸೇರ್ಪಡೆ ಆದೇಶ

**ಸಂಖ್ಯೆ: ಮೂಅಇ 63 ನಮೂಯೋ 2014 ಬೆಂಗಳೂರು, ದಿನಾಂಕ: 30.06.2015.**

ಸರ್ಕಾರಿ ಆದೇಶ ಸಂಖ್ಯೆ: ಮೂಅಇ 63 ನಮೂಯೋ 2014, ದಿನಾಂಕ: 28.04.2015ರ ಅನುಬಂಧದ ಕ್ರಮ ಸಂಖ್ಯೆ: 12ರ ನಂತರ ಈ ಕೆಳಕಂಡಂತೆ ಸೇರಿಸಿ ಓದತಕ್ಕದ್ದು:

ಕ್ರಮ ಸಂಖ್ಯೆ: **"12ಎ 3465–01–800–0–01 Interest payment to HUDCO-Debit Servicing ₹.20.00 ಲಕ್ಷ"**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.506** **ವೆಂಕಟೇಶ ಮೂರ್ತಿ. ಎಂ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆ,

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ: ಮೂಅಇ 63 ನಮೂಯೋ 2014 ಬೆಂಗಳೂರು, ದಿನಾಂಕ: 30.06.2015.**

ಸರ್ಕಾರಿ ಆದೇಶ ಸಂಖ್ಯೆ: ಮೂಅಇ 63 ನಮೂಯೋ 2014, ದಿನಾಂಕ: 28.04.2015ರ ಅನುಬಂಧದ ಕ್ರಮ ಸಂಖ್ಯೆ: 18ರ "ಲೆಕ್ಕ ಶೀರ್ಷಿಕೆ 5465–01–190–3–10–186 **Cost Sharing Bidar-Gulbarga New Railway line projects**" ರ ಬದಲಾಗಿ "ಲೆಕ್ಕ ಶೀರ್ಷಿಕೆ 5465–01–190–3–10–133 **Cost Sharing Bidar-Gulbarga New Railway line projects**" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವೆಂಕಟೇಶ ಮೂರ್ತಿ. ಎಂ**

ಸರ್ಕಾರದ ಅಧೀನ ಕಾರ್ಯದರ್ಶಿ,

**P.R.507** ಮೂಲ ಸೌಲಭ್ಯ ಅಭಿವೃದ್ಧಿ ಇಲಾಖೆ,

## ಇಂಧನ ಸಚಿವಾಲಯ

### ತಿದ್ದುಪಡಿ ಆದೇಶ

**ಸಂಖ್ಯೆ ಇಎನ್54 ವಿಎಸ್‌ಸಿ 2014 ಬೆಂಗಳೂರು, ದಿನಾಂಕ: 12.08.2015.**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 54 ವಿಎಸ್‌ಸಿ 2014 ದಿನಾಂಕ: 28.02.2015ರ ಆದೇಶಕ್ಕೆ ಹೊಂದಿಕೊಂಡಿರುವ ಅನುಬಂಧಕ್ಕೆ ಕಂಡಿಕೆ 8ರ ವಿತರಣಾ ಕಂಪನಿಗಳ (**ESCOM**) ಪಾತ್ರ ಭಾಗದ ಕ್ರಮ ಸಂಖ್ಯೆ (1) ರಲ್ಲಿ

1. ಡಾ॥ ಬಿ. ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ, ಮಹರ್ಷಿ ವಾಲ್ಮೀಕಿ ಪರಿಶಿಷ್ಟ ವರ್ಗದ ಅಭಿವೃದ್ಧಿ ನಿಗಮ, ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳಿಂದ ಇಚ್ಛೆಯುಳ್ಳ ಫಲಾನುಭವಿಗಳನ್ನು ಆಯ್ಕೆ ಮಾಡಿ ಸದರಿ ಫಲಾನುಭವಿಗಳ ವಂತಿಗೆಯೊಂದಿಗೆ ಸಿದ್ಧಪಡಿಸಿದ ಪಟ್ಟಿಯನ್ನು ಕೆಆರ್‌ಇಡಿಎಲ್ ಸಂಸ್ಥೆಗೆ ಕಳುಹಿಸಿಕೊಡುವುದು. ಮೊದಲು ಅರ್ಜಿಯನ್ನು ಸಲ್ಲಿಸಿದ ಫಲಾನುಭವಿಗಳಿಗೆ ಮೊದಲ ಆದ್ಯತೆ ನೀಡಿ ಆಯ್ಕೆ ಮಾಡುವುದು
(first come first serve basis).

**ಎಂಬುದನ್ನು**

i. ವಿತರಣಾ ಕಂಪನಿಗಳ ವ್ಯಾಪ್ತಿಯಲ್ಲಿ ಇಚ್ಛೆಯುಳ್ಳ ಫಲಾನುಭವಿಗಳನ್ನು ಆಯ್ಕೆ ಮಾಡಿ ಸದರಿ ಫಲಾನುಭವಿಗಳ ವಂತಿಗೆಯೊಂದಿಗೆ ಸಿದ್ಧಪಡಿಸಿದ ಪಟ್ಟಿಯನ್ನು ಕೆಆರ್‌ಇಡಿಎಲ್ ಸಂಸ್ಥೆಗೆ ಕಳುಹಿಸಿಕೊಡುವುದು. ಮೊದಲು ಅರ್ಜಿಯನ್ನು ಸಲ್ಲಿಸಿದ ಫಲಾನುಭವಿಗಳಿಗೆ ಮೊದಲ ಆದ್ಯತೆ ನೀಡಿ ಆಯ್ಕೆ ಮಾಡುವುದು
(first come first serve basis).

**ಎಂದು ತಿದ್ದಿ ಓದಿಕೊಳ್ಳತಕ್ಕದ್ದು.**

**ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R.508** **ಜಿ.ಎನ್. ಯಡ್ರಾವಿ**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ,

## ಕಾನೂನು ಸಚಿವಾಲಯ

**ವಿಷಯ :** ವಿಜಯಪುರ ಕಂದಾಯ ತಾಲ್ಲೂಕು, ವಿಜಯಪುರ ಜಿಲ್ಲೆ ಇಲ್ಲಿ ಹೊಸದಾಗಿ ಸೃಜಿಸಿರುವ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಲಾ 10 ಎಲ್‌ಸಿಎಲ್ 2012, ದಿನಾಂಕ : 09–06–2014.
2. ಸರ್ಕಾರದ ಪತ್ರ ಸಂಖ್ಯೆ : 346 ಎಲ್‌ಸಿಎಲ್ 2014, ದಿನಾಂಕ : 22–09–2014.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ವಿಜಯಪುರ ಜಿಲ್ಲೆ, ಇವರ ಪತ್ರ ಸಂಖ್ಯೆ : 2530/2015, ದಿನಾಂಕ : 17–04–2015.
4. ಸರ್ಕಾರಿ ಅಧಿಸೂಚನೆ ಸಂಖ್ಯೆ : ಲಾ 157 ಎಲ್‌ಸಿಎಲ್ 2015, ದಿನಾಂಕ : 30–05–2015.
5. ಸಂದರ್ಶನದ ಸಭಾ ಸೂಚನಾ ಪತ್ರದ ದಿನಾಂಕ: 15–06–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ವಿಜಯಪುರ ಕಂದಾಯ ತಾಲ್ಲೂಕು, ವಿಜಯಪುರ ಜಿಲ್ಲೆ ಇಲ್ಲಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ಹೊಸದಾಗಿ ಒಂದು ಹೆಚ್ಚುವರಿ ನೋಟರಿ ಹುದ್ದೆಯನ್ನು ಸೃಜಿಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ಪತ್ರದಲ್ಲಿ ಸದರಿ ಹುದ್ದೆಯನ್ನು ತುಂಬುವ ಕುರಿತಂತೆ ನೋಟರಿಗಳ ಅಧಿನಿಯಮ/ನಿಯಮಗಳು 1956 ನಿಯಮ 6(1)(2) ಮತ್ತು 7(1)(2)(3) ರನ್ವಯ ಮತ್ತು ತಿದ್ದುಪಡಿ ನಿಯಮಗಳನ್ವಯ ಅಧಿಸೂಚನೆ ಹೊರಡಿಸಿ ಸ್ಥಳೀಯ ಜಾಹೀರಾತು ನೀಡಿ ಆ ಮೂಲಕ ಸ್ವೀಕರಿಸುವ ಅರ್ಜಿಗಳನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ 1977ರ ನಿಯಮ 12 ರನ್ವಯ ಪರಿಶೀಲಿಸಿ ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು. ಆ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಪತ್ರದಲ್ಲಿ 37 ವಕೀಲರುಗಳ ಮೆಮೋರಿಯಲ್‌ಗಳನ್ನು ಅವರ ಅಭಿಪ್ರಾಯದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸರ್ಕಾರಿ ಅಧಿಸೂಚನೆಯಲ್ಲಿ ಸಂಖ್ಯೆ : ಲಾ 61 ಎಲ್‌ಸಿಎಲ್ 2009, ದಿನಾಂಕ : 14–07–2010ರ ಮತ್ತು ಸಂಖ್ಯೆ : ಲಾ 53 ಎಲ್‌ಸಿಎಲ್ 2013, ದಿನಾಂಕ : 23–07–2013ರ ಸರ್ಕಾರಿ ಅಧಿಸೂಚನೆಗಳಲ್ಲಿ ನೋಟರಿ ಸಂದರ್ಶನ ಮಂಡಳಿಗೆ ರಚಿಸಲಾಗಿರುವ ಸಮಿತಿಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಿ, 1952ರ ಕೇಂದ್ರ ಅಧಿನಿಯಮ, ಸೆಕ್ಷನ್ 15ರಲ್ಲಿ (1951ರ ಅಧಿನಿಯಮ 53) ಓದಲಾದ ನೋಟರಿಗಳ ತಿದ್ದುಪಡಿ ನಿಯಮಗಳು, ಹಾಗೂ 2009ರ ನೋಟರಿಗಳ (ತಿದ್ದುಪಡಿ ನಿಯಮಗಳ, ನಿಯಮ 7(ಎ)(2)ರನ್ವಯ ಈ ಕೆಳಕಂಡ ನೋಟರಿ ಸಂದರ್ಶನ ಮಂಡಳಿಯನ್ನು ಮುಂದಿನ ಆದೇಶದವರೆಗೆ ಜಾರಿಗೆ ಬರುವಂತೆ ರಚಿಸಲಾಗಿದೆ.

| | | | |
|---|---|---|---|
| 1. | ಅಪರ ಕಾನೂನು ಕಾರ್ಯದರ್ಶಿಗಳು (ಅಭಿಪ್ರಾಯ) | – | ಅಧ್ಯಕ್ಷರು |
| 2. | ಕಾನೂನು ಕೋಶದ ಮುಖ್ಯಸ್ಥರು (ಹಿರಿಯ ಸಿವಿಲ್ ನ್ಯಾಯಾಧೀಶರು) (ಲೋಕೋಪಯೋಗಿ ಮತ್ತು ಜಲಸಂಪನ್ಮೂಲ ಇಲಾಖೆ) | – | ಸದಸ್ಯರು |
| 3. | ಕಾನೂನು ಕೋಶದ ಮುಖ್ಯಸ್ಥರು(ಹಿರಿಯ ಸಿವಿಲ್ ನ್ಯಾಯಾಧೀಶರು (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) | – | ಸದಸ್ಯರು |

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುವ ಎಲ್ಲಾ ವಕೀಲರುಗಳನ್ನು ಸಂದರ್ಶನಕ್ಕೆ ಆಹ್ವಾನಿಸಿ ದಿನಾಂಕ : 26–06–2015 ರಂದು ನಡೆದ ಸಂದರ್ಶನ ಮಂಡಳಿಯಲ್ಲಿ **ಶ್ರೀ ದೇವರಾಜ್ ಎಸ್. ಜಿಂಜರವಾಡ್,** ವಕೀಲರು, ಅಟ್ ಪೋಸ್ಟ್ ಕುಮಠೆ, ವಿಜಯಪುರ ತಾಲ್ಲೂಕು, ವಿಜಯಪುರ ಜಿಲ್ಲೆ–586101. ಇವರನ್ನು ವಿಜಯಪುರ ಕಂದಾಯ ತಾಲ್ಲೂಕು, ವಿಜಯಪುರ ಜಿಲ್ಲೆ ಇಲ್ಲಿ ಹೊಸದಾಗಿ ಸೃಜಿಸಿರುವ ಒಂದು ಹೆಚ್ಚುವರಿ ನೋಟರಿ ಹುದ್ದೆಗೆ ನೇಮಕಾತಿ ಮಾಡಲು ಶಿಫಾರಸ್ಸು ಮಾಡಲಾಗಿದೆ.

ಆ ಮೇರೆಗೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಲಾ 144 ಎಲ್‌ಸಿಎಲ್ 2015, ಬೆಂಗಳೂರು, ದಿನಾಂಕ : 21–07–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ನೋಟರಿ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ **ಶ್ರೀ ದೇವರಾಜ್ ಎಸ್. ಜಿಂಜರವಾಡ್,** ವಕೀಲರು, ಅಟ್ ಪೋಸ್ಟ್ ಕುಮಠೆ, ವಿಜಯಪುರ ತಾಲ್ಲೂಕು, ವಿಜಯಪುರ ಜಿಲ್ಲೆ–586101. ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಜಾರಿಗೆ ಬರುವಂತೆ 5 (ಐದು) ವರ್ಷಗಳ ಅವಧಿಗೆ ವಿಜಯಪುರ ಕಂದಾಯ ತಾಲ್ಲೂಕಿನಲ್ಲಿ ಹೊಸದಾಗಿ ಸೃಜಿಸಿರುವ ನೋಟರಿ ಹುದ್ದೆಗೆ ನೇಮಕಾತಿ ಮಾಡಲಾಗಿದೆ.

ಸದರಿ, ವಕೀಲರು ಲೆಕ್ಕ ಶೀರ್ಷಿಕೆ 0070 – ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000.00 (ಒಂದು ಸಾವಿರ ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952 ಕಲಂ 4 ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ನೋಟರಿ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 495**

**S.C.- 25**

**ಸಯಿದಾ ಬಾನು**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ–2)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೂಲಭೂತಸೌಲಭ್ಯ ಅಭಿವೃದ್ಧಿ/ಮೂಲಸೌಕರ್ಯ ಅಭಿವೃದ್ಧಿ ಇಲಾಖೆಯ ಹೆಸರನ್ನು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಎಂದು ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :**

1. ಸುತ್ತೋಲೆ ಸಂಖ್ಯೆ ಮೂಅಇ 84 ಮೂಇವಿ 2014, ದಿನಾಂಕ : 25–08–2014.
2. ಅ.ಟಿ ಸಂಖ್ಯೆ : ಸಿಆಸುಇ 94 ಸೇನಿಸಿ 2014(ಪ.ಕ.), ದಿನಾಂಕ : 29–09–2014 ಮತ್ತು 03–12–2014.

**ಪ್ರಸ್ತಾವನೆ :**

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯು ದಿನಾಂಕ : 29–09–1996 ರಲ್ಲಿ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 15 ಎಸಿಎಂ 1996 ರನ್ವಯ Infrastructure Development Department ಎಂದು ಅಸ್ತಿತ್ವಕ್ಕೆ ಬಂದಿರುತ್ತದೆ Infrastructure Development Department ಎಂಬುದನ್ನು ಕನ್ನಡದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಎಂದು ಪರಿಗಣಿಸಿ, ಎಲ್ಲಾ ಇಲಾಖೆಗಳೊಂದಿಗೆ ವ್ಯವಹರಿಸಲಾಗುತ್ತಿದೆ. ಆದರೆ, ಕನ್ನಡದಲ್ಲಿ ಪ್ರಕಟಿಸಿದ Karnataka Allocation of Business Rules (ಕರ್ನಾಟಕ ವ್ಯವಹಾರ ಹಂಚಿಕೆ ನಿಯಮಗಳು) ನಲ್ಲಿ Infrastructure Development Department ಅನ್ನು "ಮೂಲಸೌಕರ್ಯ ಅಭಿವೃದ್ಧಿ ಇಲಾಖೆ" ಎಂದು ಪ್ರಕಟಿಸಲಾಗಿರುತ್ತದೆ.

2. ಇದರಿಂದ ಸರ್ಕಾರಕ್ಕೆ ಆಗುವ ಮುಜುಗರವನ್ನು ತಡೆಗಟ್ಟುವ ಹಿನ್ನೆಲೆಯಲ್ಲಿ ಉಲ್ಲೇಖ(1)ರ ದಿನಾಂಕ : 25–08–2014ರ ಸುತ್ತೋಲೆಯಲ್ಲಿ ಸಾರ್ವಜನಿಕರ ಹಾಗೂ ಆಡಳಿತದ ಹಿತದೃಷ್ಟಿಯಿಂದ ಇಲಾಖೆಯ ಪದನಾಮವನ್ನು ಎಲ್ಲಾ ಕಡತ ಮತ್ತು ಪತ್ರ ವ್ಯವಹಾರಗಳಲ್ಲಿ Infrastructure Development Department ಅನ್ನು ಕನ್ನಡದಲ್ಲಿ "ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ" ಎಂದೇ ಮುಂದುವರೆಸಿ ನಮೂದಿಸುವಂತೆ/ಉಪಯೋಗಿಸುವಂತೆ ಸೂಚಿಸಲಾಗಿರುತ್ತದೆ.

3. ಉಲ್ಲೇಖ(2)ರ ದಿನಾಂಕ : 29–09–2014 ಮತ್ತು 03–12–2014 ಅನಧಿಕೃತ ಟಿಪ್ಪಣಿಗಳಲ್ಲಿ ಸಿಆಸು ಇಲಾಖೆಯ ಸೇವಾ ನಿಯಮಗಳು ಶಾಖೆಯವರು ಕರ್ನಾಟಕ ಸರ್ಕಾರದ (ಕೆಲಸಗಳ ಹಂಚಿಕೆ) ನಿಯಮಗಳು, 1977 ರಲ್ಲಿ ಇಲಾಖಾ ಶೀರ್ಷಿಕೆ ಬದಲಾವಣೆ ಮಾಡಲು ಆಡಳಿತ ಇಲಾಖೆಯ ಪ್ರಭಾರದಲ್ಲಿ ಇರುವ ಸಚಿವರ ಅನುಮೋದನೆ ಪಡೆದು ಸರ್ಕಾರದ ಆದೇಶ ಹೊರಡಿಸಿ, ಅದರ ಪ್ರತಿಯೊಂದಿಗೆ ತಿದ್ದುಪಡಿ ಪ್ರಸ್ತಾವನೆ ಸಲ್ಲಿಸಲು ತಿಳಿಸಲಾಗಿರುತ್ತದೆ. ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 84 ಮೂಇವಿ 2014, ಬೆಂಗಳೂರು, ದಿನಾಂಕ : 17-06-2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಇನ್ನು ಮುಂದೆ ಮೂಲಭೂತ ಸೌಲಭ್ಯ ಅಭಿವೃದ್ಧಿ/ಮೂಲಸೌಕರ್ಯ ಅಭಿವೃದ್ಧಿ ಇಲಾಖೆಯ ಹೆಸರನ್ನು ಸಾರ್ವಜನಿಕರ ಹಾಗೂ ಆಡಳಿತದ ಹಿತದೃಷ್ಟಿಯಿಂದ ಎಲ್ಲಾ ಕಡತ ಮತ್ತು ಪತ್ರ ವ್ಯವಹಾರಗಳಲ್ಲಿ Infrastructure Development Department ಅನ್ನು ಕನ್ನಡದಲ್ಲಿ "ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ" ಎಂದು ನಮೂದಿಸುವಂತೆ/ಉಪಯೋಗಿಸುವಂತೆ ಸೂಚಿಸಲಾಗಿದೆ.

2. ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ದಿನಾಂಕ : 29–09–2014ರ ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಆಸುಇ 94 ಸೇನಿಸಿ 2014 (ಪ.ಕ.) ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 496**
**S.C. - 50**

**ವೆಂಕಟೇಶ ಮೂರ್ತಿ ಎಂ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮ ಸಹಾಯಕರಿಗೆ ರಾಷ್ಟ್ರೀಯ ಪಿಂಚಣಿ ಯೋಜನೆ (N.P.S-Lite) ಯನ್ನು ಅನುಷ್ಠಾನಗೊಳಿಸಲು ಅಗ್ರಿಗೇಟರನ್ನು ನೇಮಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 83 ಬಿಎಸ್‌ಸಿ 2011, ದಿನಾಂಕ : 07–12–2012.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ : 02-01–2015 ರಂದು ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಆದೇಶದಲ್ಲಿ ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮ ಸಹಾಯಕರುಗಳಿಗೆ ಅಂಗನವಾಡಿ ಕಾರ್ಯಕರ್ತೆಯರಿಗೆ ಒದಗಿಸಲಾಗಿರುವ ರೀತಿಯಲ್ಲಿ ರಾಷ್ಟ್ರೀಯ ಪಿಂಚಣಿ ಯೋಜನೆ (N.P.S-Lite) ಸೌಲಭ್ಯವನ್ನು ಒದಗಿಸಲು ಆದೇಶಿಸಿದೆ.

ಸಾಮಾಜಿಕ ಭದ್ರತೆ ಮತ್ತು ಪಿಂಚಣಿ ನಿರ್ದೇಶನಾಲಯವು ವಿಧವಾ ವೇತನ, ವೃದ್ಧಾಪ್ಯ ವೇತನ, ಅಂಗವಿಕಲ ವೇತನ ಇತ್ಯಾದಿ ಪಿಂಚಣಿ ಸಂಬಂಧಿತ ಕಾರ್ಯಗಳನ್ನು ನಿರ್ವಹಿಸುತ್ತಿದ್ದು, ಉತ್ತಮ ಸಂಪರ್ಕಜಾಲ ಹೊಂದಿರುವುದರಿಂದ, ಗ್ರಾಮ ಸಹಾಯಕರುಗಳಿಗೆ ರಾಷ್ಟ್ರೀಯ ಪಿಂಚಣಿ ಯೋಜನೆ '(N.P.S-Lite) ಯನ್ನು ಈ ನಿರ್ದೇಶನಾಲಯಕ್ಕೆ ವಹಿಸಿದಲ್ಲಿ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಬಹುದಾಗಿರುವುದರಿಂದ, ಹಾಗೂ ಯೋಜನೆಯನ್ನು ನಿರ್ದೇಶನಾಲಯದ ಮೂಲಕ ಅನುಷ್ಠಾನಗೊಳಿಸಲು ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ ಇವರು ಸಹಮತಿ ವ್ಯಕ್ತಪಡಿಸಿರುವುದರಿಂದ, ಯೋಜನೆಯ ಅನುಷ್ಠಾನವನ್ನು ಈ ನಿರ್ದೇಶನಾಲಯಕ್ಕೆ ವಹಿಸಲು ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ : 02–01–2015ರ ಸಭಾನಡವಳಿಯಲ್ಲಿ ತೀರ್ಮಾನಿಸಲಾಗಿದೆ. ಮೊದಲಿಗೆ ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ ಇವರು 'Pension Fund Regulatary and Development Authority (PFRDA) ಯವರಲ್ಲಿ ಅಗ್ರಿಗೇಟರ್ ಆಗಿ ನೋಂದಾಯಿಸಿಕೊಂಡು, ತದನಂತರ ಫಲಾನುಭವಿಗಳನ್ನು ಗುರುತಿಸಲು ಸೂಕ್ತ ಫೆಸಿಲಿಟೇಟರ್‌ಗಳನ್ನು ನೇಮಿಸಿಕೊಳ್ಳಲು ತೀರ್ಮಾನಿಸಲಾಗಿದೆ. ಆದ್ದರಿಂದ, ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 76 ಬಿಎಸ್‌ಸಿ 2014, ಬೆಂಗಳೂರು, ದಿನಾಂಕ : 06-06-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಂದಾಯ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಗ್ರಾಮ ಸಹಾಯಕರಿಗೆ ರಾಷ್ಟ್ರೀಯ ಪಿಂಚಣಿ ಯೋಜನೆ (N.P.S-Lite)ಯನ್ನು ಅನುಷ್ಠಾನಗೊಳಿಸಲು ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ, ಕಂದಾಯ ಇಲಾಖೆ, ಬೆಂಗಳೂರು ಇವರನ್ನು PFRDA ಅಡಿಯಲ್ಲಿ ಯೋಜನೆಯ ಅಗ್ರಿಗೇಟರ್ ಆಗಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 497**
**S.C. - 25**

**ರೇವಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯ ಬಾಲ ಕಾರ್ಮಿಕ ಕೋಶವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 100 ಸಸಿವಿ 1997, ದಿನಾಂಕ : 17-06-1997.
2. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 19 ಸಸಿವಿ 2004, ದಿನಾಂಕ : 19-11-2004.
3. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 458 ಸಅಸೇ 2008, ದಿನಾಂಕ : 25-02-2011.
4. ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 196 ಸಉಸೇ 2014, ದಿನಾಂಕ : 05-11-2014.
5. ಕಾರ್ಮಿಕ ಇಲಾಖೆಯ ಕಡತ ಸಂಖ್ಯೆ : ಎಲ್‌ಡಿ 45 ಸಿಎಲ್‌ಸಿ 2015.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಬಾಲ ಕಾರ್ಮಿಕ ಕಲ್ಯಾಣಕ್ಕಾಗಿ ಬಾಲ ಕಾರ್ಮಿಕ ಕೋಶವನ್ನು ಸೃಜಿಸಿ ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಾರ್ಮಿಕ ಇಲಾಖೆಯ (ಬಾಲ ಕಾರ್ಮಿಕ ಕೋಶ) ದಲ್ಲಿನ ವಿಶೇಷಾಧಿಕಾರಿ ಮತ್ತು ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಜಂಟಿ ಕಾರ್ಯದರ್ಶಿ ವೃಂದಕ್ಕೆ ಉನ್ನತೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ : 18-06-2014 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ವಿಶೇಷಾಧಿಕಾರಿ<br>(ವೇತನ ಶ್ರೇಣಿ ರಹಿತ ಹುದ್ದೆ) | 1 |
| 2 | ಸಹಾಯಕರು | 2 |
| 3 | ಶೀಘ್ರಲಿಪಿಗಾರರು | 1 |
| 4 | ವಾಹನ ಚಾಲಕರು | 1 |
| 5 | ಗ್ರೂಪ್-ಡಿ | 1 |
| | **ಒಟ್ಟು ಹುದ್ದೆಗಳ ಸಂಖ್ಯೆ** | **6** |

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಕಾರ್ಮಿಕ ಇಲಾಖೆಯ ಕಡತದಲ್ಲಿ ಬಾಲ ಕಾರ್ಮಿಕ ಕೋಶದ ಅವಧಿಯು ದಿನಾಂಕ : 17-06-2014ಕ್ಕೆ ಮುಕ್ತಾಯವಾಗುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ : 18-06-2015 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 291 ಸಉಸೇ 2015, ಬೆಂಗಳೂರು, ದಿನಾಂಕ : 24ನೇ ಜುಲೈ 2015.**

ಕರ್ನಾಟಕ ಸರ್ಕಾರ ಸಚಿವಾಲಯದ ಕಾರ್ಮಿಕ ಇಲಾಖೆಯಲ್ಲಿ ಸೃಜಿಸಲಾಗಿರುವ ಬಾಲ ಕಾರ್ಮಿಕ ಕೋಶವನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ದಿನಾಂಕ : 18-06-2015 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಉಪ ವಿಶೇಷಾಧಿಕಾರಿ<br>(ವೇತನ ಶ್ರೇಣಿ ರಹಿತ ಹುದ್ದೆ) | 1 |
| 2 | ಸಹಾಯಕರು | 2 |
| 3 | ಶೀಘ್ರಲಿಪಿಗಾರರು | 1 |
| 4 | ವಾಹನ ಚಾಲಕರು | 1 |
| 5 | ಗ್ರೂಪ್-ಡಿ | 1 |
| | **ಒಟ್ಟು ಹುದ್ದೆಗಳ ಸಂಖ್ಯೆ** | **6** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 498**

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** "ತಾಲ್ಲೂಕಿಗೊಂದು ಹಸಿರು ಗ್ರಾಮ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಪಮು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ : ಪಿಸಿಸಿಎಫ್ (ಅಪಮು) ಡಿ-1/ಬಿಯುಡಿ/ಸಿಆರ್-62/2015-16, ದಿನಾಂಕ : 04-05-2015.

**ಪ್ರಸ್ತಾವನೆ :**

ಅರಣ್ಯ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿ ಹಸಿರು ಕವಚವನ್ನು ಹೆಚ್ಚಿಸುವ ಸಲುವಾಗಿ ಪ್ರತಿ ತಾಲ್ಲೂಕಿನ ಆಯ್ದ ಒಂದು ಗ್ರಾಮದಲ್ಲಿ ಅರಣ್ಯ ಪ್ರದೇಶ ಅಭಿವೃದ್ಧಿ, ಔಷಧಿ ಸಸ್ಯ ಬೆಳೆಸುವುದು, ಪರ್ಯಾಯ ಇಂಧನ ಮೂಲದಿಂದ ಅಭಿವೃದ್ಧಿಪಡಿಸಿದ ದೀಪಗಳನ್ನು ಒದಗಿಸುವುದು, ಕಾಂಪೋಸ್ಟಿಂಗ್, ಎರೆಹುಳು ಗೊಬ್ಬರ ತಯಾರಿಸಲು ತರಬೇತಿ ನೀಡುವ ಕಾರ್ಯಕ್ರಮಗಳನ್ನು ಒಳಗೊಂಡ "ತಾಲ್ಲೂಕಿಗೊಂದು ಹಸಿರು ಗ್ರಾಮ" ಎಂಬ ಯೋಜನೆಯನ್ನು 2015-16ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರವು 2014-15ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಹೊಸ ಯೋಜನೆಯನ್ನು ಘೋಷಣೆ ಮಾಡಿದೆ.

ಮೇಲೆ ಓದಲಾದ ದಿನಾಂಕ : 04-05-2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು 2015-16ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಪ್ರಸ್ತಾಪಿಸಿರುವಂತೆ "ತಾಲ್ಲೂಕಿಗೊಂದು ಹಸಿರು ಗ್ರಾಮ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಐದು ವರ್ಷಗಳ ಅವಧಿಯಲ್ಲಿ ರೂ. 8292.00 ಲಕ್ಷಗಳ ಮಿತಿಯಲ್ಲಿ ಅನುಷ್ಠಾನಗೊಳಿಸಲು ಹಾಗೂ 2015-16ನೇ ಸಾಲಿನ ಲೆಕ್ಕ ಶೀರ್ಷಿಕೆ 2406-01-102-2-34-139 (ಯೋಜನೆ) ಇದರಡಿ ಒದಗಿಸಿರುವ ರೂ. 150.00 ಲಕ್ಷದ ಮಿತಿಯಲ್ಲಿ ಪ್ರಾಯೋಗಿಕವಾಗಿ ರಾಜ್ಯದ ಐದು ತಾಲ್ಲೂಕುಗಳಲ್ಲಿ "ತಾಲ್ಲೂಕಿಗೊಂದು ಹಸಿರು ಗ್ರಾಮ" ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 86 ಎಫ್‌ಎಪಿ 2015, ಬೆಂಗಳೂರು, ದಿನಾಂಕ : 15ನೇ ಜುಲೈ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015-16ನೇ ಸಾಲಿನಿಂದ ಜಾರಿಗೆ ಬರುವಂತೆ ಅರಣ್ಯ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿ ಹಸಿರು ಕವಚವನ್ನು ಹೆಚ್ಚಿಸುವ ಸಲುವಾಗಿ ಪ್ರತೀ ತಾಲ್ಲೂಕಿನ ಆಯ್ದ ಒಂದು ಗ್ರಾಮದಲ್ಲಿ ಅರಣ್ಯ ಪ್ರದೇಶ ಅಭಿವೃದ್ಧಿ, ಔಷಧಿ ಸಸ್ಯ ಬೆಳೆಸುವುದು, ಪರ್ಯಾಯ ಇಂಧನ ಮೂಲದಿಂದ ಅಭಿವೃದ್ಧಿಪಡಿಸಿದ ದೀಪಗಳನ್ನು ಒದಗಿಸುವುದು, ಕಾಂಪೋಸ್ಟಿಂಗ್, ಎರೆಹುಳು ಗೊಬ್ಬರ ತಯಾರಿಸಲು ತರಬೇತಿ ನೀಡುವ ಕಾರ್ಯಕ್ರಮಗಳನ್ನು ಒಳಗೊಂಡ "ತಾಲ್ಲೂಕಿಗೊಂದು ಹಸಿರು ಗ್ರಾಮ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಕೆಳಕಂಡ ಮಾರ್ಗಸೂಚಿಗಳೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

2. **ಯೋಜನೆಯ ಧ್ಯೇಯಗಳು :**

ಅ) ಈ ಯೋಜನೆಯು ಪ್ರತಿ ತಾಲ್ಲೂಕಿನಲ್ಲಿ ಒಂದು ಮಾದರಿ ಹಸಿರು ಗ್ರಾಮವಾಗಿ ಅಭಿವೃದ್ಧಿಪಡಿಸುವ ಉದ್ದೇಶ ಹೊಂದಿದ್ದು, ಈ ಯೋಜನೆಯಡಿ ಸಮುದಾಯಗಳ ಸಲಹೆಯನ್ನು ಪಡೆಯುವುದರೊಂದಿಗೆ ಹಸಿರು ತಾಂತ್ರಿಕತೆಯನ್ನು ಅಳವಡಿಸಿಕೊಂಡು ನೆಡುತೋಪು ಕಾಮಗಾರಿಗಳನ್ನು ಕೈಗೊಳ್ಳುವುದು.

ಆ) ಇಲಾಖಾ ವತಿಯಿಂದ ಗ್ರಾಮಗಳಲ್ಲಿ ಈಗಾಗಲೇ ನೆಡುತೋಪುಗಳನ್ನು ಬೆಳೆಸಿದಾಗ್ಯೂ, ಒಂದು ತಾಲ್ಲೂಕಿನ ಒಂದು ಗ್ರಾಮ ಅರಣ್ಯ ಸಮಿತಿಯನ್ನು ಎಲ್ಲಾ ವಿಧದಲ್ಲಿಯೂ ಹಸಿರು ಗ್ರಾಮವನ್ನಾಗಿ ಅಭಿವೃದ್ಧಿ ಪಡಿಸಲು ಸೂಕ್ತ ಪರಿವಿಧಿಗಳನ್ವಯ ಆಯ್ಕೆ ಮಾಡುವುದು.

ಇ) ಗ್ರಾಮಸ್ಥರಲ್ಲಿ ಹಸಿರು ನೀತಿಯ ಬಗ್ಗೆ ಅರಿವು ಮೂಡಿಸುವುದು.

ಈ) ಗ್ರಾಮಕ್ಕೆ ಹಸಿರು ತಾಂತ್ರಿಕತೆಯನ್ನು ಒದಗಿಸುವುದು ಹಾಗೂ ಸಾವಯವ ಗೊಬ್ಬರದ ಉತ್ಪಾದನೆ ಮಾಡುವುದು.

ಉ) ವೃಕ್ಷಹೊದಿಕೆಯನ್ನು ಹೆಚ್ಚಿಸುವುದರಿಂದ ರಾಷ್ಟ್ರೀಯ ಅರಣ್ಯ ನೀತಿಯ ಗುರಿಯನ್ನು ಸಾಧಿಸುವುದು.

ಊ) ಔಷಧೀಯ ಸಸಿಗಳನ್ನು ಬೆಳೆಸುವುದು ಮತ್ತು ಗೃಹ ಬಳಕೆಯಿಂದ ಉತ್ಪಾದನೆಯಾಗುವ ತ್ಯಾಜ್ಯವನ್ನು ಮರುಬಳಕೆ ಮಾಡುವುದು.

ಋ) ಮಳೆ ನೀರು ಕೊಯ್ಲು ಪದ್ಧತಿಯನ್ನು ಅಳವಡಿಸುವುದು ಮತ್ತು ಮೂಲತಃ ಸ್ವಾಭಾವಿಕ ಸಂಪನ್ಮೂಲಗಳ ಸುಸ್ಥಿರ ಉಪಯುಕ್ತತೆ ಮಾಡುವುದು.

ಎ) ಉಪಯೋಗಿಸಿದ ನೀರಿನ ಮರುಬಳಕೆಯ ಬಗ್ಗೆ ಅರಿವು ಮೂಡಿಸುವುದು.

ಏ) ಔಷಧೀಯ ಸಸ್ಯಗಳ/ತೋಟಗಾರಿಕೆ/ಅರಣ್ಯ ತಳಿಗಳ ಉಪಯುಕ್ತತೆ, ನೀರು ಮತ್ತು ಶಕ್ತಿಯ ಮರುಬಳಕೆ ಮತ್ತು ಅರಣ್ಯ ಸಂರಕ್ಷಣೆಯ ಕೌಶಲ್ಯಾಭಿವೃದ್ಧಿ ತರಬೇತಿ ಏರ್ಪಡಿಸುವುದು.

3. **ಯೋಜನೆಯ ಕಾರ್ಯಕ್ರಮಗಳು :**

ಅ) ನೆಡುತೋಪು ರಚನೆ, 25 ಹೆಕ್ಟೇರ್ ಪ್ರದೇಶದಲ್ಲಿ ಹಣ್ಣು, ಮೇವು ಹಾಗೂ ಔಷಧೀಯ ಜಾತಿಯ ಸಸಿಗಳನ್ನು ನೆಟ್ಟು ನೆಡುತೋಪುಗಳನ್ನು ಬೆಳೆಸುವುದು.

ಆ) ಆಯ್ಕೆ ಮಾಡಲಾದ ಗ್ರಾಮ ಅರಣ್ಯ ಸಮಿತಿಯ ಪ್ರತಿ ಕುಟುಂಬಕ್ಕೆ ಆರೋಗ್ಯದ ದೃಷ್ಟಿಯಿಂದ ಸಾಮಾನ್ಯವಾಗಿ ಉಪಯೋಗಿಸುವ ಔಷಧಿಯುಕ್ತ ಸಸಿಗಳನ್ನು ಬೇಡಿಕೆಯನುಸಾರ ವಿತರಿಸುವುದು.

ಇ) ಸೌರಶಕ್ತಿ ಚಾಲಿತ ಬೀದಿ ದೀಪ ಮತ್ತು ಗೃಹೋಪಯೋಗಿ ದೀಪಗಳನ್ನು ವಿತರಿಸುವುದು.

ಈ) ಗೃಹೋಪಯೋಗಿ ತ್ಯಾಜ್ಯದಿಂದ ಎರೆಹುಳು ಗೊಬ್ಬರ ತಯಾರಿಕೆಗೆ ಗುಂಡಿ ನಿರ್ಮಿಸುವುದು.

4. ಈ ಯೋಜನೆಯನ್ನು ಆಯುಷ್, ತೋಟಗಾರಿಕೆ, ಜಲಾನಯನ ಅಭಿವೃದ್ಧಿ ಇಲಾಖೆ, KREDL ಗಳ ಕಾರ್ಯಕ್ರಮಗಳ ಜೋಡಣೆಯೊಂದಿಗೆ ಅನುಷ್ಠಾನಗೊಳಿಸತಕ್ಕದ್ದು.

5. 2015-16ನೇ ಸಾಲಿನಲ್ಲಿ ಈ ಯೋಜನೆಯನ್ನು ಅರಣ್ಯದ ಅಂಚಿನಲ್ಲಿರುವ ಅರಣ್ಯ ಇಲಾಖೆಯಿಂದ ಆಯ್ಕೆಯಾದ ಐದು (5) ತಾಲ್ಲೂಕುಗಳಲ್ಲಿನ ಒಂದು ಅರ್ಹ ಗ್ರಾಮವನ್ನು ಆಯ್ಕೆ ಮಾಡಿ ಗ್ರಾಮ ಅರಣ್ಯ ಸಮಿತಿಗಳ ಮೂಲಕ ಅನುಷ್ಠಾನಗೊಳಿಸತಕ್ಕದ್ದು.

6. ಈ ಯೋಜನೆಗೆ ತಗಲುವ ವೆಚ್ಚವನ್ನು 2015-16ನೇ ಸಾಲಿನ ಲೆಕ್ಕ ಶೀರ್ಷಿಕೆ 2406-01-102-2-34-139 (ಯೋಜನೆ) ಇದರಡಿ ಒದಗಿಸಿರುವ ರೂ. 3.00 ಕೋಟಿ (ಮೂರು ಕೋಟಿ ರೂಪಾಯಿಗಳು ಮಾತ್ರ) ಗಳಲ್ಲಿ ಭರಿಸತಕ್ಕದ್ದು.

7. ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರದಿಂದ 2016-17ನೇ ಸಾಲಿನಲ್ಲಿ ಯೋಜನೆಯ ಮೌಲ್ಯಮಾಪನ ಮಾಡಿಸತಕ್ಕದ್ದು.

8. ಸದರಿ ಯೋಜನೆಯ ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಹಾಗೂ ನಿಯಮಗಳು, 2000 ರನ್ವಯ ನಿರ್ವಹಿಸತಕ್ಕದ್ದು.

9. ಸದರಿ ಆದೇಶವನ್ನು ಯೋಜನಾ ಇಲಾಖೆ ಹಾಗೂ ಆರ್ಥಿಕ ಇಲಾಖೆಗಳು ಕ್ರಮವಾಗಿ ಟಿಪ್ಪಣಿ ಸಂಖ್ಯೆ : ಪಿಡಿ/26/ಪಿಎಫ್ಒ/2015 ದಿನಾಂಕ : 21-05-2015 ಮತ್ತು ಟಿಪ್ಪಣಿ ಸಂಖ್ಯೆ : ಆಇ 479 ವೆಚ್ಚ-5/2015, ದಿನಾಂಕ : 17-06-2015ಗಳಲ್ಲಿ ನೀಡಿದ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 499**

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** "ತಾಲ್ಲೂಕಿಗೊಂದು ಹಸಿರು ಶಾಲಾವನ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅಪಮು) ಬೆಂಗಳೂರು, ಇವರ ಪ್ರಸ್ತಾವನೆ ಸಂಖ್ಯೆ : ಪಿಸಿಸಿಎಫ್ (ಅಪಮು) ಡಿ-1/ಬಿಯುಡಿ/ಸಿಆರ್-62/2015-16, ದಿನಾಂಕ : 04-05-2015.

**ಪ್ರಸ್ತಾವನೆ :**

ಅರಣ್ಯ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿ ಹಸಿರು ಕವಚವನ್ನು ಹೆಚ್ಚಿಸುವ ಸಲುವಾಗಿ ವಿದ್ಯಾರ್ಥಿಗಳಲ್ಲಿ ಅರಣ್ಯ ಮತ್ತು ಪರಿಸರದ ಮಹತ್ವದ ಬಗ್ಗೆ ಹೆಚ್ಚಿನ ಅರಿವು ಮೂಡಿಸಲು ಪ್ರತಿ ತಾಲ್ಲೂಕಿನಲ್ಲಿ ಒಂದರಂತೆ, ಅಂದಾಜು 3 ರಿಂದ 5 ಎಕರೆ ಅರಣ್ಯ/ಸರ್ಕಾರಿ ಭೂಮಿ ಸಮೀಪವಿರುವ ಒಂದು ಸರ್ಕಾರಿ ಶಾಲಾ/ಕಾಲೇಜಿನ ವಿದ್ಯಾರ್ಥಿಗಳನ್ನು ತೊಡಗಿಸಿಕೊಂಡು ಮರ-ಗಿಡಗಳನ್ನು ಬೆಳೆಸಲು ರೂ. 2.25 ಕೋಟಿಗಳ ವೆಚ್ಚದಲ್ಲಿ ಐದು ವರ್ಷಗಳ ಅವಧಿಗೆ "ತಾಲ್ಲೂಕಿಗೊಂದು ಹಸಿರು ಶಾಲಾವನ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಪ್ರಾರಂಭಿಸಲು ಸರ್ಕಾರವು 2015-16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಣೆ ಮಾಡಿದೆ.

ಮೇಲೆ ಓದಲಾದ ದಿನಾಂಕ : 04-05-2015ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು 2015-16ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಪ್ರಸ್ತಾಪಿಸಿರುವಂತೆ "ತಾಲ್ಲೂಕಿಗೊಂದು ಹಸಿರು ಶಾಲಾವನ" ಎಂಬ ಹೊಸ ಯೋಜನೆಯನ್ನು 2015-16ನೇ ಸಾಲಿನಿಂದ ಐದು ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಹಾಗೂ 2015-16ನೇ ಸಾಲಿನ ಲೆಕ್ಕ ಶೀರ್ಷಿಕೆ 2406-01-102-2-36-59 (ಯೋಜನೆ) ಇದರಡಿ ಒದಗಿಸಿರುವ ರೂ. 30.00 ಲಕ್ಷದ ಮಿತಿಯಲ್ಲಿ ಪ್ರತಿ ಶಾಲೆಗೆ ರೂ. 5.00 ಲಕ್ಷದಂತೆ 6 ಶಾಲೆಗಳಲ್ಲಿ ತಾಲ್ಲೂಕಿಗೊಂದು ಹಸಿರು ಶಾಲಾವನ ಕಾರ್ಯಕ್ರಮದ ಅನುಷ್ಠಾನಕ್ಕೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಆದ್ದರಿಂದ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 87 ಎಫ್ಎಪಿ 2015, ಬೆಂಗಳೂರು, ದಿನಾಂಕ : 15ನೇ ಜುಲೈ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅರಣ್ಯ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆಗೆ ಹೆಚ್ಚಿನ ಆದ್ಯತೆ ನೀಡಿ ಹಸಿರು ಕವಚವನ್ನು ಹೆಚ್ಚಿಸುವ ಸಲುವಾಗಿ ವಿದ್ಯಾರ್ಥಿಗಳಲ್ಲಿ ಅರಣ್ಯ ಮತ್ತು ಪರಿಸರದ ಮಹತ್ವದ ಬಗ್ಗೆ ಹೆಚ್ಚಿನ ಅರಿವು ಮೂಡಿಸಲು ಅನುಕೂಲವಾಗುವಂತೆ ರಾಜ್ಯದಲ್ಲಿ ಪ್ರತಿ ತಾಲ್ಲೂಕಿನಲ್ಲಿ ಒಂದರಂತೆ, ಅಂದಾಜು 3 ರಿಂದ 5 ಎಕರೆ ಅರಣ್ಯ/ಸರ್ಕಾರಿ ಭೂಮಿ ಸಮೀಪವಿರುವ ಒಂದು ಸರ್ಕಾರಿ ಶಾಲಾ/ಕಾಲೇಜಿನ ವಿದ್ಯಾರ್ಥಿಗಳನ್ನು

ತೊಡಗಿಸಿಕೊಂಡು ಮರ-ಗಿಡಗಳನ್ನು ಬೆಳೆಸಲು "ತಾಲ್ಲೂಕಿಗೊಂದು ಹಸಿರು ಶಾಲಾವನ" ಎಂಬ ಯೋಜನೆಯನ್ನು ಐದು ವರ್ಷಗಳ ಅವಧಿಗೆ 2015-16ನೇ ಸಾಲಿನಿಂದ ಅನ್ವಯವಾಗುವಂತೆ ಈ ಕೆಳಕಂಡ ಮಾರ್ಗಸೂಚಿಗಳೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರವು ಅನುಮೋದನೆ ನೀಡಿದೆ.

**ಯೋಜನೆಯ ರೂಪುರೇಷೆಗಳು/ಮಾರ್ಗಸೂಚಿಗಳು :**

ಅ) ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಆಯಾ ತಾಲ್ಲೂಕಿನ ಅರಣ್ಯ ಪ್ರದೇಶಕ್ಕೆ 3 ರಿಂದ 5 ಕಿ.ಮೀ. ವ್ಯಾಪ್ತಿಯೊಳಗಿರುವ ಸರ್ಕಾರಿ ಪ್ರಾಥಮಿಕ/ಹಿರಿಯ ಪ್ರಾಥಮಿಕ/ಪ್ರೌಢಶಾಲೆ/ಕಾಲೇಜು ಇವುಗಳ ಮಾಲೀಕತ್ವದಲ್ಲಿ ಇರುವ ಪ್ರದೇಶ ಅಥವಾ ಕನಿಷ್ಠ 3 ರಿಂದ 5 ಎಕರೆ ವಿಸ್ತೀರ್ಣದ ಸರ್ಕಾರಿ ಭೂಮಿ ಹೊಂದಿರುವಂತಹ ಶಾಲೆಯನ್ನು ಆಯ್ಕೆ ಮಾಡಿ ಈ ಪ್ರದೇಶದಲ್ಲಿ ನೈಸರ್ಗಿಕವಾಗಿ ಬೆಳೆಯುವಂತಹ ಹಾಗೂ ಶಾಲಾ ಮಕ್ಕಳ ಪೌಷ್ಠಿಕತೆಗೆ ಉಪಯೋಗವಾಗುವ ನೆಲ್ಲಿ, ನೇರಳೆ, ಮಾವು ಮುಂತಾದ ಸಸಿಗಳೊಂದಿಗೆ ಔಷಧಿ ಗುಣಗಳುಳ್ಳ ಸಸಿಗಳನ್ನು ಸಹ ನೆಟ್ಟು ಬೆಳಸತಕ್ಕದ್ದು.

ಆ) ಅರಣ್ಯ ಇಲಾಖೆಯ ನುರಿತ ಅಧಿಕಾರಿ/ಸಿಬ್ಬಂದಿಗಳು ಸಂಬಂಧಪಟ್ಟ ಶಾಲಾ/ಕಾಲೇಜು ಆಡಳಿತ ಮಂಡಳಿಯೊಂದಿಗೆ ಚರ್ಚಿಸಿ ಅರಣ್ಯ ಮತ್ತು ಶಿಕ್ಷಣ ಇಲಾಖೆಗಳ ಸಮನ್ವಯದೊಂದಿಗೆ ಈ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು.

ಇ) ಈ ಯೋಜನೆಯಡಿ ಪ್ರಥಮವಾಗಿ ಕಾಮಗಾರಿಗಳನ್ನು ಕೈಗೊಳ್ಳುವ ವರ್ಷದಲ್ಲಿ ಅರಣ್ಯ ಇಲಾಖೆಯು ಗುಣಿ ತೆಗೆಯುವುದು, ಸಸಿಗಳನ್ನು ಸರಬರಾಜು ಮಾಡುವುದು ಹಾಗೂ ನೆಡುತೋಪಿನ ಸುತ್ತ ಮುಳ್ಳು ಕಂಬಿಯಿಂದ ಬೇಲಿ ನಿರ್ಮಿಸುವ ಕೆಲಸಗಳನ್ನು ಮಾತ್ರ ಕೈಗೊಳ್ಳುವುದು. ಸಸಿಗಳನ್ನು ಶಾಲಾ ಮಕ್ಕಳು ನೆಟ್ಟು ನಂತರ ಅವುಗಳ ಪೋಷಣೆ/ನಿರ್ವಹಣೆ ಮತ್ತು ರಕ್ಷಣೆ ಮುಂತಾದ ಕೆಲಸಗಳನ್ನು ಶಾಲಾ ಮಕ್ಕಳು ಹಾಗೂ ಶಾಲಾ/ಕಾಲೇಜು ಆಡಳಿತ ಮಂಡಳಿಯವರೇ ನಿರ್ವಹಿಸಬೇಕು ಮತ್ತು ಕಾಲಕಾಲಕ್ಕೆ ನಿರ್ವಹಿಸಬೇಕಾದ ಕೆಲಸಗಳ ತಾಂತ್ರಿಕತೆಯ ಬಗ್ಗೆ ಹತ್ತಿರದ ವಲಯ ಅರಣ್ಯ ಅಧಿಕಾರಿ/ಸಿಬ್ಬಂದಿಯವರನ್ನು ಸಂಪರ್ಕಿಸಿ ಸಲಹೆ ಪಡೆಯತಕ್ಕದ್ದು.

ಈ) ಈ ಯೋಜನೆಯನ್ನು ಅನುಷ್ಠಾನಗೊಳಿಸುವಾಗ ಯಾವುದೇ ನಿರ್ದಿಷ್ಟ ಫಲಾನುಭವಿಗೆ/ಸಂಘ ಸಂಸ್ಥೆಗೆ/ಆಡಳಿತ ಮಂಡಳಿಗೆ ಲಾಭ ತರುವಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತಕ್ಕದ್ದಲ್ಲ.

ಉ) ಈ ಯೋಜನೆಯು ವಿದ್ಯಾರ್ಥಿಗಳಲ್ಲಿ ಅರಣ್ಯ ಹಾಗೂ ಪರಿಸರದ ಮಹತ್ವದ ಬಗ್ಗೆ ಅರಿವು ಮೂಡಿಸುವ ಯೋಜನೆಯಾಗಿರುವುದರಿಂದ ಯಾವುದೇ ರೀತಿಯ ವೇತನ/ಗೌರವಧನ/ಸಲಹಾ ವೆಚ್ಚ ಮುಂತಾದವುಗಳನ್ನು ಭರಿಸಲು ಅವಕಾಶವಿರುವುದಿಲ್ಲ.

ಊ) ಈ ಯೋಜನೆಯಡಿ ಆಯಾ ವರ್ಷದಲ್ಲಿ ನಿಗದಿಪಡಿಸುವ ಘಟಕ ದರದಂತೆ ಕಾಮಗಾರಿಗಳನ್ನು ಕೈಗೊಳ್ಳತಕ್ಕದ್ದು.

3. ಈ ಯೋಜನೆಗೆ ತಗಲುವ ವೆಚ್ಚವನ್ನು 2015-16ನೇ ಸಾಲಿನ ಲೆಕ್ಕ ಶೀರ್ಷಿಕೆ 2406-01-102-2-36-59 (ಯೋಜನೆ) ಇದರಡಿ ಒದಗಿಸಿರುವ ರೂ. 30.00 ಲಕ್ಷ (ಮೂವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳಲ್ಲಿ ಭರಿಸತಕ್ಕದ್ದು.

4. ಸದರಿ ಯೋಜನೆಯ ಕಾಮಗಾರಿಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999 ಹಾಗೂ ನಿಯಮಗಳು, 2000 ರನ್ವಯ ನಿರ್ವಹಿಸತಕ್ಕದ್ದು.

5. ಸದರಿ ಆದೇಶವನ್ನು ಯೋಜನಾ ಇಲಾಖೆ ಹಾಗೂ ಆರ್ಥಿಕ ಇಲಾಖೆಗಳು ಕ್ರಮವಾಗಿ ಟಿಪ್ಪಣಿ ಸಂಖ್ಯೆ : ಪಿಡಿ/29/ಪಿಎಫ್ಒ/2015 ದಿನಾಂಕ : 21-05-2015 ಮತ್ತು ಟಿಪ್ಪಣಿ ಸಂಖ್ಯೆ : ಆಇ 482 ವೆಚ್ಚ-5/2015, ದಿನಾಂಕ : 17-06-2015ಗಳಲ್ಲಿ ನೀಡಿದ ಸಹಮತಿಗಳನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 500

**ಎಸ್.ಪಿ. ಪಾಟೀಲ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** 2015-16ನೇ ಸಾಲಿಗೆ ಕರ್ನಾಟಕ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿಯಮಿತ, ಬೆಂಗಳೂರು ನಬಾರ್ಡ್‌ನಿಂದ ಸಾಲ ಪಡೆಯಲು ಸರ್ಕಾರ ಖಾತರಿ ನೀಡುವ ಕುರಿತು ಆದೇಶ.

**ಓದಲಾಗಿದೆ :**

3. ಸರ್ಕಾರದ ಆದೇಶ ಸಂಖ್ಯೆ ಸಿಒ 99 ಸಿಎಲ್ಎಸ್ 2013, ದಿನಾಂಕ : 02-09-2014.
4. ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು) ಇವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಲ್‌ಡಿಬಿ-1/ಖಾ.ಅ/76/15-16. ದಿನಾಂಕ : 30-05-2015 ಮತ್ತು ಪತ್ರ ಸಂಖ್ಯೆ : ಆರ್‌ಸಿಎಸ್/ಎಲ್‌ಡಿಬಿ-1/ಖಾ.ಅ/76/13-14, ದಿನಾಂಕ : 03-07-2015.

**ಪ್ರಸ್ತಾವನೆ :**

ರಾಜ್ಯದ ರೈತರ ಮತ್ತು ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಗಾಗಿ ವಿವಿಧ ಯೋಜನೆಗಳ ಮೂಲಕ ದೀರ್ಘಾವಧಿ ಕೃಷಿ ಸಾಲಗಳನ್ನು ಕಸ್ಕಾರ್ಡ್ ಬ್ಯಾಂಕ್ ವಿತರಣೆ ಮಾಡುತ್ತಿದೆ. ನೇರ ಸಾಲದ ಪದ್ಧತಿಯಲ್ಲಿ ನಬಾರ್ಡ್, ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದಿಂದ ಪುನರ್ಧನ ಪಡೆದು ಸಂಪನ್ಮೂಲಗಳನ್ನು ರೂಢಿಸಿಕೊಳ್ಳುತ್ತದೆ. ನಬಾರ್ಡಿನ ಮಾರ್ಗದರ್ಶನದಂತೆ, ಬ್ಯಾಂಕು ವಿವಿಧ ಉದ್ದೇಶಗಳಿಗೆ ಸಾಲಗಳನ್ನು ನೀಡುತ್ತಿದ್ದು, ಈ ಸಾಲಗಳ ಬಡ್ಡಿದರ, ಮರುಪಾವತಿ ಅವಧಿ ಮುಂತಾದ ನಿಬಂಧನೆಗಳನ್ನು ನಬಾರ್ಡ್ ನಿಗದಿಪಡಿಸುವಂತೆ ಜಾರಿಗೊಳಿಸಲಾಗುತ್ತಿದೆ. ರಾಜ್ಯ ಸರ್ಕಾರವು ಬ್ಯಾಂಕಿನ ಪರವಾಗಿ ನಬಾರ್ಡ್‌ಗೆ ಖಾತರಿಯನ್ನು ನೀಡಿ ಪ್ರೋತ್ಸಾಹಿಸಿಕೊಂಡು ಬಂದಿರುತ್ತದೆ.

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಸ್ಕಾರ್ಡ್ ಬ್ಯಾಂಕ್ ನಬಾರ್ಡ್‌ನಿಂದ ರೂ. 1550-00 ಕೋಟಿಗಳವರೆಗೆ ಸಾಲ ಪಡೆಯಲು ದಿನಾಂಕ : 31-03-2015 ರವರೆಗೆ ನೀಡಿದ್ದ ಖಾತರಿ ಅವಧಿಯು ಮುಕ್ತಾಯವಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 30–05–2015 ಮತ್ತು ದಿನಾಂಕ : 03–07–2015ರ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು ಖಾತರಿ ಅವಧಿಯನ್ನು ದಿನಾಂಕ : 01–04–2015 ರಿಂದ 3 ವರ್ಷಗಳ ಅವಧಿಗೆ ವಿಸ್ತಿರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಒ 211 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ : 18–08–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕಸ್ಕಾರ್ಡ್ ಬ್ಯಾಂಕ್ ನಬಾರ್ಡ್‌ಗೆ ಪಾವತಿಸಬೇಕಾದ ಹೊರಬಾಕಿಯನ್ನು ಒಳಗೊಂಡು 2015–16ನೇ ಸಾಲಿಗೆ ರೂ. 1550–00 ಕೋಟಿಗಳ (ಒಂದು ಸಾವಿರದ ಐದು ನೂರ ಐವತ್ತು ಕೋಟಿ ರೂಪಾಯಿಗಳು ಮಾತ್ರ) ಮೊತ್ತಕ್ಕೆ ದಿನಾಂಕ : 01–04–2015 ರಿಂದ ದಿನಾಂಕ : 31–03–2016 ರವರೆಗೆ ಸರ್ಕಾರದ ಖಾತರಿಯನ್ನು ನೀಡಲು ಶೇ. 1ರ ಖಾತರಿ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸುವ ಷರತ್ತಿಗೊಳಪಟ್ಟು ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ/261/ಇಎಕ್ಸ್‌ಪಿ–2/2015, ದಿನಾಂಕ : 22–07–2015ರ ಸಹಮತಿಯೊಂದಿಗೆ ಹಾಗೂ ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು 1977ರ ನಿಯಮ 9ರ ಮೊದಲನೇ ಅನುಸೂಚಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 516

ಎಂ. ವೆಂಕಟಸ್ವಾಮಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ದಿನಾಂಕ : 31–03–2015ಕ್ಕೆ ಅಂತ್ಯಗೊಳ್ಳುವ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಒಇ 149 ಪಿಪಿಇ 2014, ದಿನಾಂಕ : 03–07–2014.
2. ಸರ್ಕಾರದ ಆದೇಶ ಸಂಖ್ಯೆ : ಲಾ 112 ಎಲ್‌ಸಿಇ 2012, ದಿನಾಂಕ : 28–12–2012.
3. ಸರ್ಕಾರದ ಆದೇಶ ಸಂಖ್ಯೆ : ಒಇ 162 ಪಿಪಿಇ 2006, ದಿನಾಂಕ : 30–06–2007.
4. ಅಭಿಯೋಗ ನಿರ್ದೇಶಕರ ಪತ್ರ ಸಂಖ್ಯೆ : ಡಿಪಿಎನ್/ಸಿಶಾ–1/252/2014–15, ದಿನಾಂಕ : 16–05–2015.

**ಸರ್ಕಾರದ ಆದೇಶ ಸಂಖ್ಯೆ ಒಇ 129 ಪಿಪಿಇ 2015, ಬೆಂಗಳೂರು, ದಿನಾಂಕ : 28–07–2015.**

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ 1ರಲ್ಲಿನ ಸರ್ಕಾರಿ ಆದೇಶದಲ್ಲಿ 863 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 31–03–2015 ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು/ಕಛೇರಿಗಳು ಅಸ್ಥಿತ್ವದಲ್ಲಿ ಇರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : 2 ರಲ್ಲಿನ ಸರ್ಕಾರಿ ಆದೇಶದಲ್ಲಿ 39 ಶೀಘ್ರಗತಿ ನ್ಯಾಯಾಲಯಗಳು ದಿನಾಂಕ : 31–03–2015 ಕ್ಕೆ ಮುಕ್ತಾಯಗೊಂಡಿರುವುದರಿಂದ ಅವುಗಳಿಗೆ ಸಂಬಂಧಪಟ್ಟ 39 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಪಟ್ಟಿಯಿಂದ ಕೈಬಿಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ 3 ರಲ್ಲಿನ ಸರ್ಕಾರಿ ಆದೇಶದಲ್ಲಿ ಜಗಳೂರು, ಚಳ್ಳಕೆರೆ, ಜೇವರ್ಗಿ, ಅಫಜಲಪುರ, ನಿಪ್ಪಾಣಿ, ಅಥಣಿ, ಮದ್ದೂರು, ಮುಧೋಳದ ಸಹಾಯಕ ಸರ್ಕಾರಿ ಅಭಿಯೋಜಕರುಗಳ ಕಛೇರಿಗಳಿಗೆ ಮತ್ತು ಧಾರವಾಡದ ಸರ್ಕಾರಿ ಅಭಿಯೋಜಕರ ಕಛೇರಿಗಳಿಗೆ ಒಟ್ಟು 9 ದಲಾಯತ್ ಹುದ್ದೆಗಳನ್ನು ಬಾಹ್ಯ ಮೂಲಗಳಿಂದ ತುಂಬಿಕೊಳ್ಳುವಂತೆ ಆದೇಶಿಸಿರುವ ಹಿನ್ನೆಲೆಯಲ್ಲಿ ಸದರಿ ಹುದ್ದೆಗಳನ್ನು ತಾತ್ಕಾಲಿಕ ಹುದ್ದೆಗಳ ಮುಂದುವರಿಕೆ ಪಟ್ಟಿಯಿಂದ ಕೈಬಿಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ : 4 ರಲ್ಲಿನ ಅಭಿಯೋಗ ನಿರ್ದೇಶಕರ ಪತ್ರದಲ್ಲಿ 841 ತಾತ್ಕಾಲಿಕ ಹುದ್ದೆಗಳಲ್ಲಿ ಕ್ರಮ ಸಂಖ್ಯೆ : 2 ರಲ್ಲಿನ 39 ತ್ವರಿತ ವಿಲೇವಾರಿ ನ್ಯಾಯಾಲಯಗಳಿಗೆ ಸಂಬಂಧಪಟ್ಟಂತೆ 39 ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಮತ್ತು ಮೇಲೆ ಓದಲಾದ ಕ್ರಮ ಸಂಖ್ಯೆ 3 ರಲ್ಲಿನ 9 ದಲಾಯತ್ ಹುದ್ದೆಗಳನ್ನು ಹೊರತುಪಡಿಸಿ ಉಳಿದ ಒಟ್ಟು 793 ಹುದ್ದೆಗಳನ್ನು ದಿನಾಂಕ : 31–03–2018 ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು/ಕಛೇರಿಗಳು ಅಸ್ಥಿತ್ವದಲ್ಲಿ ಇರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರಿ ಅಭಿಯೋಜಕರು | 62 |
| 2 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 28 |
| 3 | ಕಾನೂನು ಅಧಿಕಾರಿ (ಕಿರಿಯ) | 11 |
| 4 | ಸಹಾಯಕ ಸರ್ಕಾರಿ ಅಭಿಯೋಜಕರು | 235 |

| ಕ್ರ.ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 5 | ಲೆಕ್ಕ ಪರಿಶೋಧನಾಧಿಕಾರಿ | 01 |
| 6 | ಆಡಳಿತಾಧಿಕಾರಿ | 01 |
| 7 | ಅಧೀಕ್ಷಕರು | 23 |
| 8 | ಶೀಘ್ರಲಿಪಿಗಾರರು | 110 |
| 9 | ಪ್ರಥಮ ದರ್ಜೆ ಸಹಾಯಕರು | 13 |
| 10 | ಸಹಾಯಕ ಗ್ರಂಥಪಾಲಕರು | 1 |
| 11 | ದ್ವಿತೀಯ ದರ್ಜೆ ಸಹಾಯಕರು | 16 |
| 12 | ಬೆರಳಚ್ಚುಗಾರರು | 180 |
| 13 | ವಾಹನ ಚಾಲಕರು | 2 |
| 14 | ಅಟೆಂಡರ್ | 43 |
| 15 | ದಲಾಯತ್ | 65 |
| 16 | ಗ್ರೂಪ್–ಡಿ | 02 |
| | **ಒಟ್ಟು** | **793** |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅಭಿಯೋಗ ಇಲಾಖೆಯ ಒಟ್ಟು 793 ತಾತ್ಕಾಲಿಕ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ : 31–03–2016 ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು/ಕಛೇರಿಗಳು ಅಸ್ಥಿತ್ವದಲ್ಲಿ ಇರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಆದೇಶ**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ವಿವಿಧ ನ್ಯಾಯಾಲಯ/ಕಛೇರಿಗಳಲ್ಲಿನ ಈ ಕೆಳಕಂಡಂತಿರುವ ಒಟ್ಟಾರೆ 793 ತಾತ್ಕಾಲಿಕ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ : 31–03–2016 ರವರೆಗೆ ಅಥವಾ ಸಂಬಂಧಪಟ್ಟ ನ್ಯಾಯಾಲಯಗಳು/ಕಛೇರಿಗಳು ಅಸ್ಥಿತ್ವದಲ್ಲಿ ಇರುವವರೆಗೆ ಅಥವಾ ಸದರಿ ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಘೋಷಿಸುವವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

| ಕ್ರ.ಸಂ. | ಹುದ್ದೆಗಳ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಸರ್ಕಾರಿ ಅಭಿಯೋಜಕರು | 62 |
| 2 | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 28 |
| 3 | ಕಾನೂನು ಅಧಿಕಾರಿ (ಕಿರಿಯ) | 11 |
| 4 | ಸಹಾಯಕ ಸರ್ಕಾರಿ ಅಭಿಯೋಜಕರು | 235 |
| 5 | ಲೆಕ್ಕ ಪರಿಶೋಧನಾಧಿಕಾರಿ | 01 |
| 6 | ಆಡಳಿತಾಧಿಕಾರಿ | 01 |
| 7 | ಅಧೀಕ್ಷಕರು | 23 |
| 8 | ಶೀಘ್ರಲಿಪಿಗಾರರು | 110 |
| 9 | ಪ್ರಥಮ ದರ್ಜೆ ಸಹಾಯಕರು | 13 |
| 10 | ಸಹಾಯಕ ಗ್ರಂಥಪಾಲಕರು | 1 |
| 11 | ದ್ವಿತೀಯ ದರ್ಜೆ ಸಹಾಯಕರು | 16 |
| 12 | ಬೆರಳಚ್ಚುಗಾರರು | 180 |
| 13 | ವಾಹನ ಚಾಲಕರು | 2 |
| 14 | ಅಟೆಂಡರ್ | 43 |
| 15 | ದಲಾಯತ್ | 65 |
| 16 | ಗ್ರೂಪ್–ಡಿ | 02 |
| | **ಒಟ್ಟು** | **793** |

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು 2014–ನ್ಯಾಯಪರಿಪಾಲನೆ 114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು –02–ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು. 002–ಅಧಿಕಾರಿಗಳ ವೇತನ. 003–ಸಿಬ್ಬಂದಿ ವೇತನ ಈ ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಇಲಾಖಾ ಪ್ರಧಾನ/ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಆದೇಶ ಸಂಖ್ಯೆ : ಆಇ 58 ಎಸ್‌ಆರ್‌ಎಸ್ 79, ದಿನಾಂಕ : 07–09–1979ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 517**

**S.C - 100**

**ದೇವೇಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಯೋಜನಾ ಇಲಾಖೆಯ ಅಪರ/ಜಂಟಿ ಕಾರ್ಯದರ್ಶಿಗಳ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 29 ಸಅಸೇ 2008, ದಿನಾಂಕ : 27–02–2008.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 533 ಸಉಸೇ 2014, ದಿನಾಂಕ : 20–01–2015.
3. ಯೋಜನಾ ಇಲಾಖೆಯ ಕಡತ ಸಂಖ್ಯೆ : ಪಿಡಿ 42 ಎಸ್‌ಪಿಬಿ 2015.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ : 27–02–2008ರ ಸರ್ಕಾರಿ ಆದೇಶದಲ್ಲಿ ಯೋಜನಾ ಇಲಾಖೆಯಲ್ಲಿ ಅಪರ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ : 01–04–2014 ರಿಂದ ಒಂದು ವರ್ಷದ ಅವಧಿಗೆ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಹುದ್ದೆಗಳೊಂದಿಗೆ ಮುಂದುವರೆಸಲಾಗಿದೆ. ಮೇಲೆ ಕ್ರಮಸಂಖ್ಯೆ (3)ರಲ್ಲಿ ಓದಲಾದ ಕಡತದಲ್ಲಿ ಯೋಜನಾ ಇಲಾಖೆಯು ಮೇಲ್ಕಂಡ ಹುದ್ದೆಗಳ ಅವಧಿಯು ದಿನಾಂಕ : 31–03–2015ಕ್ಕೆ ಮುಕ್ತಾಯವಾಗಲಿರುವುದರಿಂದ ಹಾಗೂ ಸದರಿ ಹುದ್ದೆಗಳನ್ನು ಮುಂದಿನ ಒಂದು ವರ್ಷದ ಅವಧಿಗೆ ವಿಸ್ತಿರಿಸುವ ಅವಶ್ಯಕತೆಯಿರುವುದರಿಂದ, ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಈ ಕೆಳಕಂಡ ಪೂರಕ ಹುದ್ದೆಗಳೊಂದಿಗೆ ದಿನಾಂಕ : ರಿಂದ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ (ಹೊರ ಗುತ್ತಿಗೆಯಿಂದ) |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 266 ಸಉಸೇ 2015, ಬೆಂಗಳೂರು, ದಿನಾಂಕ : 15–07–2015.**

ಯೋಜನಾ ಇಲಾಖೆಯಲ್ಲಿಯ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿಗಳ ಹುದ್ದೆಯನ್ನು ದಿನಾಂಕ : 01–04–2015 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಡನೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರ | 1 ಹುದ್ದೆ |
| 2 | ಕಿರಿಯ ಸಹಾಯಕ | 1 ಹುದ್ದೆ |
| 3 | ದಲಾಯತ್ | 1 ಹುದ್ದೆ (ಹೊರ ಗುತ್ತಿಗೆಯಿಂದ) |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ : 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 518**

**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–6)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಹಿರಿಯ ಆಪ್ತ ಕಾರ್ಯದರ್ಶಿ ವೃಂದಕ್ಕೆ ನಿಗದಿಪಡಿಸಿರುವ ನೇಮಕಾತಿ ವಿಧಾನವನ್ನು ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 369 ಸಅಸೇ 2007 (ಭಾ), ದಿನಾಂಕ : 07-07-2011.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 369 ಸಅಸೇ 2007 (ಭಾ), ದಿನಾಂಕ : 26-09-2011.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 400 ಸಅಸೇ 2011 (ಭಾ), ದಿನಾಂಕ : 05-11-2012.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 230 ಸಉಸೇ 2014, ದಿನಾಂಕ : 09-04-2015.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 269 ಸಉಸೇ 2014, ದಿನಾಂಕ : 08-07-2015.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಹೊಸದಾಗಿ ವೇತನ ಶ್ರೇಣಿ ರೂ. 24,450–31,800ರ 03 ಹಿರಿಯ ಆಪ್ತ ಕಾರ್ಯದರ್ಶಿ ವೃಂದದ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಹೊಸದಾಗಿ ಸೃಜಿಸಲಾಗಿರುವ ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗಳಿಗೆ ಸಂಬಂಧಪಟ್ಟಂತೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ, ಈ ಕೆಳಕಂಡಂತೆ ನೇಮಕಾತಿ ವಿಧಾನವನ್ನು ನಿಗದಿಪಡಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ |
|---|---|---|---|
| 1 | ಹಿರಿಯ ಆಪ್ತ ಕಾರ್ಯದರ್ಶಿ<br>(Senior Private Secretary)<br>ರೂ. 24,450–31,800 | 3 | **By promotion :** Must have put in a service of not less than 5 years in the cadre of Private Secretary (Grade-1). Provided if officers put in a service of 5 years are not available officers who have put in a service of three years may be considered for promotion. |

ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಆಪ್ತ ಕಾರ್ಯದರ್ಶಿ (ಗ್ರೇಡ್–1 ಮತ್ತು ಗ್ರೇಡ್–2) ವೃಂದದ ಅಧಿಕಾರಿಗಳು ಮುಂಬಡ್ತಿ ಪಡೆಯಲು ವಿಳಂಬವಾಗುತ್ತಿರುವುದರಿಂದ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ 03 ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗಳನ್ನು ತಾತ್ಕಾಲಿಕವಾಗಿ, ಸದರಿ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದವರೆಗೆ ಸೃಜಿಸಿ ಆದೇಶಿಸಲಾಗಿರುತ್ತದೆ.

ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಒಟ್ಟು 6 ಹಿರಿಯ ಆಪ್ತ ಕಾರ್ಯದರ್ಶಿಗಳ ಹುದ್ದೆಗಳ ಪೈಕಿ ಮೂರು ಹುದ್ದೆಗಳನ್ನು ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ) ಹುದ್ದೆಗಳನ್ನಾಗಿ (ವೇತನ ಶ್ರೇಣಿ ರೂ. 52500–73000) ಉನ್ನತೀಕರಿಸಿ ಆದೇಶಿಸಿ, ಹಿರಿಯ ಆಪ್ತ ಕಾರ್ಯದರ್ಶಿ ಮತ್ತು ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ) ಈ ಎರಡೂ ವೃಂದಗಳಿಗೆ ಸೇರಿದಂತೆ ವೃಂದಬಲವು ಒಟ್ಟು 6 ಹುದ್ದೆಗಳಾಗಿರುತ್ತದೆ ಎಂದು ಆದೇಶಿಸಲಾಗಿದೆ.

ಮುಂದುವರೆದು, ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಆಪ್ತ ಕಾರ್ಯದರ್ಶಿ (ಗ್ರೇಡ್–1) 23 ಹುದ್ದೆಗಳ ಪೈಕಿ 12 ಹುದ್ದೆಗಳನ್ನು ವೇತನ ಶ್ರೇಣಿ ರೂ. 48900–63600 ರ ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಲಾಗಿದೆ. ಆದರೆ ಹಾಗೆ ಉನ್ನತೀಕರಿಸಿದ ಹುದ್ದೆಯಲ್ಲಿ ಬಡ್ತಿ ಹೊಂದುವ 12 ಅಧಿಕಾರಿಗಳು ನಿವೃತ್ತಿ ಹೊಂದುವವರೆಗೆ ಮಾತ್ರ ಈ ಹುದ್ದೆಗಳು ಜಾರಿಯಲ್ಲಿದ್ದು, ತದನಂತರ ಆಪ್ತ ಕಾರ್ಯದರ್ಶಿ (ಗ್ರೇಡ್–1) ವೃಂದದ ಹುದ್ದೆಗಳಾಗಿ ನಿಮ್ನೀಕರಿಸಲ್ಪಡುತ್ತವೆ ಎಂದು ಆದೇಶಿಸಲಾಗಿದೆ.

ಕ್ರಮ ಸಂಖ್ಯೆ (4) ಮತ್ತು (5)ರಲ್ಲಿ ಓದಲಾದ ಆದೇಶಗಳಿಂದಾಗಿ ಪ್ರಸ್ತುತ ಹಿರಿಯ ಆಪ್ತ ಕಾರ್ಯದರ್ಶಿ ವೃಂದದ ವೃಂದಬಲ ಒಟ್ಟು 15 ಆಗಿರುತ್ತದೆ. ಆಪ್ತ ಕಾರ್ಯದರ್ಶಿ (ಗ್ರೇಡ್–1) ವೃಂದದಿಂದ ಹಿರಿಯ ಆಪ್ತ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ಹೊಂದಲಿರುವ 12 ಅಧಿಕಾರಿಗಳಲ್ಲಿ ಜೇಷ್ಠತೆಯಲ್ಲಿ ಮೊದಲಿನ 8 ಅಧಿಕಾರಿಗಳು ಮಾತ್ರ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 369 ಸಅಸೇ 2007 (ಭಾ), ದಿನಾಂಕ : 26–09–2011ರ ಕಾರ್ಯಕಾರಿ ಆದೇಶದನ್ವಯ ಕನಿಷ್ಠ ಮೂರು ವರ್ಷಗಳ ಅರ್ಹತಾದಾಯಕ ಸೇವೆಯನ್ನು ಪೂರೈಸಿದ್ದು, ಇನ್ನುಳಿದ 4 ಅಧಿಕಾರಿಗಳು ಕನಿಷ್ಠ ಅರ್ಹತಾದಾಯಕ ಸೇವೆಯನ್ನು ಪೂರೈಸಿರುವುದಿಲ್ಲ. ಈ ಆಪ್ತ ಕಾರ್ಯದರ್ಶಿ (ಗ್ರೇಡ್–1) ವೃಂದದ 4 ಅಧಿಕಾರಿಗಳಿಗೆ ಹಿರಿಯ ಆಪ್ತ ಕಾರ್ಯದರ್ಶಿ ವೃಂದಕ್ಕೆ ಬಡ್ತಿ ನೀಡಲು, ಸದರಿ ಕಾರ್ಯಕಾರಿ ಆದೇಶದನ್ವಯ ನಿಗದಿಪಡಿಸಿರುವ ಮೂರು ವರ್ಷಗಳ ಅರ್ಹತಾದಾಯಕ ಸೇವೆಯನ್ನು ಕನಿಷ್ಠ ಒಂದು ವರ್ಷಕ್ಕೆ ಮರುನಿಗದಿಪಡಿಸಬೇಕಾಗಿದ್ದು, ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 269 ಸಉಸೇ 2014, ಬೆಂಗಳೂರು, ದಿನಾಂಕ : 23ನೇ ಜುಲೈ, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಹಿರಿಯ ಆಪ್ತ ಕಾರ್ಯದರ್ಶಿ ವೃಂದದ 6 ಹುದ್ದೆಗಳಲ್ಲಿ 3 ಹುದ್ದೆಗಳನ್ನು ಅಯ್ಕೆ ಶ್ರೇಣಿಗೆ ಉನ್ನತೀಕರಿಸಿರುವುದರಿಂದ ಪ್ರಸ್ತುತ ಹಿರಿಯ ಆಪ್ತ ಕಾರ್ಯದರ್ಶಿ ವೃಂದದಲ್ಲಿ 3 ಶಾಶ್ವತ ಹುದ್ದೆಗಳು ಮತ್ತು 12 ತಾತ್ಕಾಲಿಕ ಹುದ್ದೆಗಳು ಒಟ್ಟು 15 ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗಳಿಗೆ ಸಂಬಂಧಪಟ್ಟಂತೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ವಿಧಾನವನ್ನು ನಿಗದಿಪಡಿಸಲಾಗಿದೆ.

1 ಈ ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ 6 ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.

2 6 ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ಕರ್ನಾಟಕ ಸರ್ಕಾರ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.

3 6 ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು), ವಿಭಾಗದ ಟಿಪ್ಪಣಿ ಸಂಖ್ಯೆ ಸಿಆಸುಇ 116 ಸೇನಿಡಿ 2015, ದಿನಾಂಕ : 22-07-2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

## ಅನುಬಂಧ

| ಕ್ರಮ ಸಂಖ್ಯೆ | ಹುದ್ದೆ | ಹುದ್ದೆಗಳ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|---|
| 1 | ಹಿರಿಯ ಆಪ್ತ ಕಾರ್ಯದರ್ಶಿ (Senior Private Secretary) ರೂ. 48900-63600 | 3 (ಶಾಶ್ವತ ಹುದ್ದೆಗಳು) ಹಾಗೂ 12 ತಾತ್ಕಾಲಿಕವಾಗಿ ಉನ್ನತೀಕರಿಸಿದ ಹುದ್ದೆಗಳು | By promotion from the cadre of Private Secretary (Grade-1) | **For promotion :** Must have put in a service of not less than 5 years in the cadre of Private Secretary (Grade-1) Provided that if officers who have put in a service of not less than 5 years are not available, the officers who have put in a service of not less than 3 years may be considered for promotion. Provided further that, in respect of 12 upgraded Senior Private Secretary posts, if officers who have put in not less than 3 years of service in the cadre of Private Secretary (Grade-1) are not available, then officers who have put in not less than one year of service may be considered for promotion. |

**P.R. 519**

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-6)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಎನ್. ಕೃಷ್ಣಾರೆಡ್ಡಿ (ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಹಾಸನ ವೃತ್ತ ಹಾಸನ ಜಿಲ್ಲೆ) ಪ್ರಸ್ತುತ ಸಹಾಯಕ ಔಷಧ ನಿಯಂತ್ರಕರು-1, ಬಳ್ಳಾರಿ ವೃತ್ತ, ಬಳ್ಳಾರಿ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದ ಕುರಿತಂತೆ ಕ.ನಾ.ಸೇ (ಸಿ.ಸಿ.ಎ) ನಿಯಮಾವಳಿ 1957ರ ಅಡಿಯಲ್ಲಿ ಶಿಸ್ತು ಕ್ರಮ-ದಂಡನೆ ಆದೇಶ.

**ಓದಲಾಗಿದೆ :**

1. ಔಷಧ ನಿಯಂತ್ರಕರ ಪತ್ರ ಸಂಖ್ಯೆ : ಔನಿಇ/653/ಸಿಬ್ಬಂದಿ/2008-09, ದಿನಾಂಕ : 28-03-2009.
2. ಸರ್ಕಾರಿ ಆದೇಶ ಸಂಖ್ಯೆ : ಆಕುಕ 41 ಐಎಂಎಂ 2009, ದಿನಾಂಕ : 30-03-2009, 03-12-2009 ಮತ್ತು 11-01-2010.
3. ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ : ಲೋಕ್/ಐಎನ್‌ವಿ (ಜಿ)/ ಎಂ-19/ಸಿಆರ್-10/2009, ಹಾಸನ, ದಿನಾಂಕ : 22-09-2009.
4. ಸರ್ಕಾರಿ ಆದೇಶ ಸಂಖ್ಯೆ : ಆಕುಕ 41 ಐಎಂಎಂ 2009, ದಿನಾಂಕ : 19-04-2012.
5. ಉಪ ನಿಬಂಧಕರು ವಿಚಾರಣೆ-1, ಕರ್ನಾಟಕ ಲೋಕಾಯುಕ್ತ ಇವರು ಅ.ಸ. ಪತ್ರ ಸಂಖ್ಯೆ : Compt/uplok/Mys-43/2010/DRE-1, Date : 09-03-2012.
6. ಕರ್ನಾಟಕ ಉಪ ಲೋಕಾಯುಕ್ತ ಇವರ ಪತ್ರ ಸಂಖ್ಯೆ : LOK/ARE-1/ENQ 231/2012, Dated : 03-03-2015.
7. ಕಾರಣ ಕೇಳುವ ನೋಟೀಸ್ ಸಂಖ್ಯೆ : ಆಕುಕ 41 ಐಎಂಎಂ 2009, ದಿನಾಂಕ : 23-03-2015.
8. ಶ್ರೀ ಎನ್. ಕೃಷ್ಣಾರೆಡ್ಡಿ, ಸಹಾಯಕ ಔಷಧ ನಿಯಂತ್ರಕರು, ಬಳ್ಳಾರಿ ವೃತ್ತ, ಇವರ ಲಿಖಿತ ಹೇಳಿಕೆ ದಿನಾಂಕ : 27-03-2015.

ಪ್ರಸ್ತಾವನೆ :

ಮೇಲೆ ಓದಲಾದ ಕ್ರಮ ಸಂಖ್ಯೆ : (2)ರ ದಿನಾಂಕ : 30–03–2009ರ ಆದೇಶದಲ್ಲಿ ಶ್ರೀ ಎನ್. ಕೃಷ್ಣಾರೆಡ್ಡಿ, ಪ್ರಸ್ತುತ ಸಹಾಯಕ ಔಷಧ ನಿಯಂತ್ರಕರು–1, ಬಳ್ಳಾರಿ ವೃತ್ತ, ಬಳ್ಳಾರಿ ಇವರು ಈ ಹಿಂದೆ ಸಹಾಯಕ ಔಷಧ ನಿಯಂತ್ರಕರು, ಹಾಸನ ವೃತ್ತ, ಹಾಸನ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿಯವರು ಶ್ರೀ ಪ್ರಕಾಶ್ ಬಿನ್ ಮಹೇಂದ್ರಕರ್, ಭಾವನಾ ಮೆಡಿಕಲ್ಸ್, ಲಕ್ಷ್ಮೀಪುರಂ ವಾಸಿ ಹಾಸನ ಇವರಿಂದ ಲಂಚದ ಹಣವನ್ನು ನೀಡುವಂತೆ ಒತ್ತಾಯಿಸುತ್ತಿರುವುದರ ಮೇರೆಗೆ ರೂ. 1000/–ಗಳನ್ನು ಲಂಚವಾಗಿ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಕ್ಕಿ ಬಿದ್ದಿರುವುದರಿಂದ ಮತ್ತು ಹಾಸನ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ : 10/2009 ಕಲಂ 7/13(1)(ಡಿ)ರೆ:ವಿ 13(2) ಆಫ್ ಪಿ.ಸಿ.ಆಕ್ಟ್–198ರ ಪ್ರಕಾರ ಕೇಸ್ ದಾಖಲು ಮಾಡಿಕೊಂಡು ಪ್ರಥಮ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಸದರಿ ಅಧಿಕಾರಿಯವರ ವಿರುದ್ಧ ಲೋಕಾಯುಕ್ತ ವಿಚಾರಣೆ ಬಾಕಿ ಇಟ್ಟು ಕ್ರಮ ಸಂಖ್ಯೆ : (1)ರ ದಿನಾಂಕ : 30–03–2009ರ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ತದನಂತರ, ಸದರಿ ಅಧಿಕಾರಿಯವರ ವಿರುದ್ಧ ಮಾನ್ಯ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಅಪರ ಪೊಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ, ಬೆಂಗಳೂರು ಇವರು ಕ್ರಮ ಸಂಖ್ಯೆ : (3)ರ ದಿನಾಂಕ : 22–09–2009ರ ಪತ್ರದಲ್ಲಿ ಸರ್ಕಾರವನ್ನು ಕೋರಿರುವ ಮೇರೆಗೆ ಸದರಿ ಅಧಿಕಾರಿಯವರ ವಿರುದ್ಧ ಮಾನ್ಯ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಕ್ರಮ ಸಂಖ್ಯೆ : (2)ರ ದಿನಾಂಕ : 03–12–2009ರ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ : 11–01–2010ರ ಆದೇಶದಲ್ಲಿ ಶ್ರೀ ಎನ್. ಕೃಷ್ಣಾರೆಡ್ಡಿ, ಸಹಾಯಕ ಔಷಧ ನಿಯಂತ್ರಕರು (ಅಮಾನತ್ತಿನಲ್ಲಿ) ಇವರ ಅಮಾನತ್ತನ್ನು ತೆರವುಗೊಳಿಸಿ ಮಾನ್ಯ ಲೋಕಾಯುಕ್ತ ವಿಚಾರಣೆಯನ್ನು ಬಾಕಿ ಇರಿಸಿ ಸೇವೆಗೆ ಪುನರ್‌ಸ್ಥಾಪಿಸಿದೆ. ತದನಂತರ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಶ್ರೀ ಎನ್. ಕೃಷ್ಣಾರೆಡ್ಡಿ, ಸಹಾಯಕ ಔಷಧ ನಿಯಂತ್ರಕರು, ಇವರ ವಿರುದ್ಧ ಹಿಂದೆ ದಾಖಲಾದ ಲೋಕಾಯುಕ್ತ ಪ್ರಕರಣ ಸಂಖ್ಯೆ : ಸಿಆರ್ ನಂ.10/2009ಕ್ಕೆ ಸಂಬಂಧಪಟ್ಟಂತೆ ಇವರ ವಿರುದ್ಧ ಮಾಡಲಾದ ಅಪಾದನೆಯನ್ನು ಕುರಿತಂತೆ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರವರು ಕೋರಿರುವ ಮೇರೆಗೆ ಮೇಲೆ ಓದಲಾದ ಕ್ರಮ ಸಂಖ್ಯೆ 4ರ ಆದೇಶದಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಪೂರ್ಣ ಪ್ರಮಾಣ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 14–ಎ ರನ್ವಯ ಕರ್ನಾಟಕ ಉಪ ಲೋಕಾಯುಕ್ತರವರಿಗೆ ವಹಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ : (6)ರ ಪತ್ರದಲ್ಲಿ ಶ್ರೀ ಎನ್. ಕೃಷ್ಣಾರೆಡ್ಡಿ (ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಹಾಸನ ವೃತ್ತ, ಹಾಸನ ಜಿಲ್ಲೆ) ಪ್ರಸ್ತುತ ಸಹಾಯಕ ಔಷಧ ನಿಯಂತ್ರಕರು–1, ಬಳ್ಳಾರಿ ವೃತ್ತ, ಬಳ್ಳಾರಿ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದ ಕುರಿತಂತೆ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮಾನ್ಯ ಉಪ ಲೋಕಾಯುಕ್ತರವರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯಲ್ಲಿ ಶ್ರೀ ಎನ್. ಕೃಷ್ಣಾರೆಡ್ಡಿ ಸಹಾಯಕ ಔಷಧ ನಿಯಂತ್ರಕರು, ಶ್ರೀ ಪ್ರಕಾಶ್ ಬಿನ್ ಮಹೇಂದ್ರಕರ್, ಭಾವನಾ ಮೆಡಿಕಲ್ಸ್, ಲಕ್ಷ್ಮೀಪುರಂ ವಾಸಿ ಹಾಸನ ಇವರಿಂದ ಲಂಚದ ಹಣವನ್ನು ನೀಡುವಂತೆ ಒತ್ತಾಯಿಸುತ್ತಿರುವುದರ ಮೇರೆಗೆ ದಿನಾಂಕ : ರೂ. 1000/–ಗಳನ್ನು ಲಂಚವಾಗಿ ಪಡೆದಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಸದರಿ ಅಧಿಕಾರಿಯವರಿಗೆ (ಐದು) 5 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(iii)ರ ಪ್ರಕಾರ ತಡೆಹಿಡಿಯುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಲೋಕಾಯುಕ್ತ ಕಛೇರಿಯಿಂದ ಸ್ವೀಕೃತವಾದ ಇಲಾಖಾ ವರದಿಯನ್ನು ಏಕೆ ಅಂಗೀಕರಿಸಬಾರದು ಎಂಬುದರ ಬಗ್ಗೆ ವಿಚಾರಣಾ ವರದಿಯನ್ನು ಅಪಾಧಿತ ಅಧಿಕಾರಿಯವರಿಗೆ ಕಳುಹಿಸಿ ಈ ಬಗ್ಗೆ ಲಿಖಿತ ಹೇಳಿಕೆ ನೀಡುವಂತೆ ಕಾರಣ ಕೇಳುವ ನೋಟೀಸನ್ನು ಕ್ರಮ ಸಂಖ್ಯೆ : (7)ರಲ್ಲಿ ಜಾರಿ ಮಾಡಲಾಗಿತ್ತು. ಇದಕ್ಕೆ ಸಂಬಂಧಪಟ್ಟಂತೆ ಸದರಿ ಅಧಿಕಾರಿಯವರು ಲಿಖಿತ ಹೇಳಿಕೆಯನ್ನು ದಿನಾಂಕ : 27–03–2015ರಂದು ಸಲ್ಲಿಸಿ ಮಾನ್ಯ ಲೋಕಾಯುಕ್ತರವರು ವಿಚಾರಣೆ ವೇಳೆಯಲ್ಲಿ ಯಾವುದೇ ದಾಖಲೆಗಳನ್ನು ಹಾಗೂ ಸಾಕ್ಷಿಗಳನ್ನು ಅಧಿಕಾರಿಯವರಿಗೆ ಒದಗಿಸದೇ ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡು ವೇತನ ಬಡ್ತಿಗಳನ್ನು ತಡೆಹಿಡಿಯುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವುದನ್ನು ಸರ್ಕಾರವು ಪರಿಗಣಿಸಬಾರದೆಂದು ಕೋರುತ್ತಾ, ಹಾಗೂ ಹಾಸನ ಸೆಷನ್ಸ್ ನ್ಯಾಯಾಲಯವು ದಿನಾಂಕ : 30–12–2013ರ ಆದೇಶದಂತೆ ಅಧಿಕಾರಿಯವರನ್ನು ದೋಷಮುಕ್ತಗೊಳಿಸುವಂತೆ ಕ್ರಮ ಸಂಖ್ಯೆ : (8)ರ ದಿನಾಂಕ : 27–03–2013ರ ಮನವಿಯಲ್ಲಿ ಕೋರಿರುತ್ತಾರೆ. ಸದರಿ ಅಧಿಕಾರಿಯವರು ಸಲ್ಲಿಸಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ, ಯಾವುದೇ ಉರುಳು ಇರುವುದಿಲ್ಲ.

ಆದ್ದರಿಂದ, ಶ್ರೀ ಎನ್. ಕೃಷ್ಣಾರೆಡ್ಡಿ, ಪ್ರಸ್ತುತ ಸಹಾಯಕ ಔಷಧ ನಿಯಂತ್ರಕರು–1, ಬಳ್ಳಾರಿ ವೃತ್ತ, ಬಳ್ಳಾರಿ ಇವರು ಈ ಹಿಂದೆ ಸಹಾಯಕ ಔಷಧ ನಿಯಂತ್ರಕರು, ಹಾಸನ ವೃತ್ತ, ಹಾಸನ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿಯವರು ಶ್ರೀ ಪ್ರಕಾಶ್ ಬಿನ್ ಮಹೇಂದ್ರಕರ್, ಭಾವನಾ ಮೆಡಿಕಲ್ಸ್, ಲಕ್ಷ್ಮೀಪುರಂ ವಾಸಿ, ಹಾಸನ ಇವರಿಂದ ರೂ. 1000/– ಗಳನ್ನು ಪಡೆದಿರುವುದು ಇಲಾಖಾ ವಿಚಾರಣೆ ವರದಿಯಲ್ಲಿ ಸಾಬೀತಾಗಿರುವುದರಿಂದ ಸದರಿ ಅಧಿಕಾರಿಯವರಿಗೆ (ಐದು) 5 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ವೇತನ ಪರಿಣಾಮವಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(iii)ರ ಪ್ರಕಾರ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 41 ಐಎಂಎಂ 2009, ಬೆಂಗಳೂರು, ದಿನಾಂಕ : 18ನೇ ಆಗಸ್ಟ್ 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 8(iii)ರ ಪ್ರಕಾರ ಶ್ರೀ ಎನ್. ಕೃಷ್ಣಾರೆಡ್ಡಿ, (ಹಿಂದಿನ ಸಹಾಯಕ ಔಷಧ ನಿಯಂತ್ರಕರು, ಹಾಸನ ವೃತ್ತ, ಹಾಸನ) ಪ್ರಸ್ತುತ ಸಹಾಯಕ ಔಷಧ ನಿಯಂತ್ರಕರು–1, ಬಳ್ಳಾರಿ ವೃತ್ತ, ಬಳ್ಳಾರಿ, ಇವರ ವೇತನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ರೂ. 28,100–700–28,800–800–33,600–900–39,000–1050–45,300–1200–50,100ರ ವೇತನ ಶ್ರೇಣಿಯಲ್ಲಿ (ಐದು) 5 ವರ್ಷಗಳ ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಬಿ. ಕಮಲಮ್ಮ
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾ.ವೈ.ಪ ಮತ್ತು ಸಮನ್ವಯ)

P.R. 521
S.C.- 25

## ಒಳಾಡಳಿತ ಸಚಿವಾಲಯ

**ವಿಷಯ :** ಗಂಗಾವತಿ ತಾ॥ ಮರಕುಂಬಿಯವರಾದ ದೊಡ್ಡ ವೀರೇಶ್ ಇವರು ಕೊಪ್ಪಳ ರೈಲ್ವೆ ನಿಲ್ದಾಣದ ಹಳಿಗಳ ಮೇಲೆ ಸಾವಿಗೀಡಾಗಿದ್ದು, ಇವರ ಪ್ರಕರಣವನ್ನು ಸಿ.ಐ.ಡಿ ತನಿಖೆಗೆ ವಹಿಸುವ ಬಗ್ಗೆ.

**ಓದಲಾಗಿದೆ :**
1. ಮಾನ್ಯ ಸಣ್ಣ ನೀರಾವರಿ ಹಾಗೂ ಕೊಪ್ಪಳ ಜಿಲ್ಲಾ ಉಸ್ತುವಾರಿ ಸಚಿವರ ನಡವಳಿ ದಿನಾಂಕ : 20-07-2015.
2. ಮಾನ್ಯ ಗೃಹ ಸಚಿವರು ಹಾಗೂ ಕೊಡಗು ಜಿಲ್ಲಾ ಉಸ್ತುವಾರಿ ಸಚಿವರ ನಡವಳಿ ದಿನಾಂಕ : 30-07-2015.

**ಪ್ರಸ್ತಾವನೆ :**

ಕೊಪ್ಪಳ ಜಿಲ್ಲೆ, ಗಂಗಾವತಿ ತಾ॥ ಕೆಸರಟ್ಟಿ ಗ್ರಾಮ ಪಂಚಾಯ್ತಿಯ ವ್ಯಾಪ್ತಿಯಲ್ಲಿನ ಮರಕುಂಬಿ ಗ್ರಾಮದ ದಿವಂಗತ ದೊಡ್ಡ ವೀರೇಶ್ ಇವರು ಕೊಪ್ಪಳ ರೈಲ್ವೆ ನಿಲ್ದಾಣದ ರೈಲ್ವೆ ಹಳಿಗಳ ಮೇಲೆ ಸಾವಿಗೀಡಾಗಿದ್ದು, ಇವರ ಸಾವಿನ ಬಗ್ಗೆ ಸಾರ್ವಜನಿಕರಲ್ಲಿ ಸಂಶಯವಿದ್ದು, ಇದನ್ನು ನಿವಾರಿಸುವ ದೃಷ್ಟಿಯಿಂದ ಪ್ರಕರಣದ ಬಗ್ಗೆ ಉನ್ನತ ಮಟ್ಟದ ತನಿಖೆ ನಡೆಸುವಂತೆ ಮೇಲೆ ಓದಲಾದ (1) ಮಾನ್ಯ ಸಣ್ಣ ನೀರಾವರಿ ಹಾಗೂ ಕೊಪ್ಪಳ ಜಿಲ್ಲಾ ಉಸ್ತುವಾರಿ ಸಚಿವರು ಮಾನ್ಯ ಗೃಹ ಸಚಿವರಿಗೆ ಕೋರಿರುವುದನ್ನು ಉಲ್ಲೇಖಿಸುತ್ತ, ಮೇಲೆ ಓದಲಾದ (2)ರ ತಮ್ಮ ನಡವಳಿಯಲ್ಲಿ ಮಾನ್ಯ ಗೃಹ ಸಚಿವರು ಸದರಿ ಪ್ರಕರಣವನ್ನು ಸಿ.ಐ.ಡಿ ತನಿಖೆಗೊಳಪಡಿಸಲು ಸೂಚಿಸಿರುತ್ತಾರೆ.

ಮುಂದುವರೆದು, ಸದರಿ ಪ್ರಕರಣವು ಕೊಪ್ಪಳ ಜಿಲ್ಲೆ, ಕೊಪ್ಪಳ ಗ್ರಾಮೀಣ ಪೊಲೀಸ್ ಠಾಣಾ ಅಪರಾಧ ಸಂಖ್ಯೆ : 0179/2015 ಕಲಂ 306 ಐ.ಪಿ.ಸಿ ಹಾಗೂ ಕಲಂ 3(1)(10), 3(2)(5) ಎಸ್.ಸಿ/ಎಸ್.ಟಿ ಕಾಯ್ದೆ 1989ರಡಿ ದಾಖಲಾಗಿರುತ್ತದೆ. ಸದರಿ ಪ್ರಕರಣವನ್ನು ಸಿ.ಐ.ಡಿ ತನಿಖೆಗೆ ವಹಿಸುವ ಕುರಿತು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ ಹೆಚ್‌ಡಿ 145 ಸಿಐಡಿ 2015, ಬೆಂಗಳೂರು, ದಿನಾಂಕ : 17ನೇ ಆಗಸ್ಟ್, 2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮರಕುಂಟಿ ಗ್ರಾಮದ ದಿವಂಗತ ದೊಡ್ಡ ವೀರೇಶ್ ಇವರ ಸಾವಿಗೆ ಸಂಬಂಧಿಸಿದಂತೆ ಕೊಪ್ಪಳ ಜಿಲ್ಲೆ ಕೊಪ್ಪಳ ಗ್ರಾಮೀಣ ಪೊಲೀಸ್ ಠಾಣಾ ಅಪರಾಧ ಸಂಖ್ಯೆ : 0179/2015 ಕಲಂ 306 ಐ.ಪಿ.ಸಿ ಹಾಗೂ ಕಲಂ 3(1)(10), 3(2)(5) ಎಸ್.ಸಿ./ಎಸ್.ಟಿ ಕಾಯ್ದೆ 1989ರ ಪ್ರಕರಣವನ್ನು ಸಿಐಡಿ ತನಿಖೆಗೆ ವಹಿಸಿ ಆದೇಶಿಸಿದೆ. ಈ ತನಿಖೆ ನಡೆಸಲು ಕೊಪ್ಪಳ ಜಿಲ್ಲೆ ಕೊಪ್ಪಳ ಗ್ರಾಮೀಣ ಪೊಲೀಸ್ ಠಾಣಾ, ಇವರು ಸಿಐಡಿ ತಂಡದವರಿಗೆ ಸಂಪೂರ್ಣ ಸಹಕಾರ ಮತ್ತು ಅವಶ್ಯ ದಾಖಲಾತಿ/ಮಾಹಿತಿ ಸಹ ಒದಗಿಸುವುದು.

ಸಿಐಡಿ ತಂಡವು ಈ ಪ್ರಕರಣದ ತನಿಖೆಯನ್ನು ಶೀಘ್ರವಾಗಿ ಪೂರ್ಣಗೊಳಿಸಿ ವರದಿಯನ್ನು ಸರ್ಕಾರಕ್ಕೆ ತ್ವರಿತವಾಗಿ ಸಲ್ಲಿಸಲು ಸೂಕ್ತ ಕ್ರಮ ಕೈಗೊಳ್ಳುವುದು ಮತ್ತು ಕೈಗೊಂಡ ಕ್ರಮದ ಬಗ್ಗೆ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ. ಸುಗುಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಅಪರಾಧಗಳು)

**P.R. 522**
**S.C.- 50**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು, 2011, ಕ್ಕೆ ತಿದ್ದುಪಡಿಗಳನ್ನು ಮಾಡಲು ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 70 ಮೊದೇಶಾ 2010 ದಿ: 21-01-2011.
2. ಕಾರ್ಯನಿರ್ವಹಕ ನಿರ್ದೇಶಕರ ಪತ್ರ ಸಂಖ್ಯೆ: ಕವಶಿಸಸ /ಆಡಳಿತ(1) ಸಿಆರ್-109/2015-16, ದಿನಾಂಕ: 22-07-2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳಿಗೆ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ (2)ರಲ್ಲಿ ಓದಲಾದ ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರ ಪತ್ರದಲ್ಲಿ ಸಂಘದ ಅಧೀನದ ಮೊರಾರ್ಜಿ ದೇಸಾಯಿ/ಕಿತ್ತೂರು ರಾಣಿ ಚೆನ್ನಮ್ಮ/ಏಕಲವ್ಯ ವಸತಿ ಶಾಲೆಗಳ ಬೋಧಕ/ಬೋಧಕೇತರ ಹುದ್ದೆಗಳ ನೇಮಕಾತಿಗೆ ಸಂದರ್ಶನ ಮಾನದಂಡವನ್ನು ಸೇರ್ಪಡೆ ಮಾಡಲು ವೃಂದ ಮತ್ತು ನೇಮಕಾತಿ ವಿನಿಯಮಗಳನ್ನು ತಿದ್ದುಪಡಿ ಮಾಡಲು ಕರಡು ತಿದ್ದುಪಡಿಯನ್ನು ಸಲ್ಲಿಸಿ, ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಹಿಂವಕ 160 ಬಿಇಟ 2015, ಬೆಂಗಳೂರು, ದಿನಾಂಕ: 17-08-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವೃಂದ ಮತ್ತು ನೇಮಕಾತಿ ವಿನಿಯಮಗಳು, 2011 ರ ಷೆಡ್ಯೂಲ್-2ಕ್ಕೆ ಈ ಆದೇಶಕ್ಕೆ ಲಗತ್ತಿಸಿರುವ ಅಧಿಸೂಚನೆಯಲ್ಲಿ ಮಾಡಲಾಗಿರುವ ತಿದ್ದುಪಡಿಗಳಿಗೆ ಸರ್ಕಾರ ಅನುಮೋದನೆ ನೀಡಿ ಆದೇಶಿಸಿದೆ.

ಈ ಆದೇಶವನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಂವ್ಯಶಾಇ 265 ಆಶಾರ 2015 ದಿನಾಂಕ: 17-08-2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಆರ್. ಎರೆಕುಪ್ಪಿ**
ಸರ್ಕಾರದ ಅಧೀನ ಕಾರ್ಯದರ್ಶಿ-1
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 529**
**SC. 300**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಇಂಧನ ಸಚಿವಾಲಯ

**ವಿಷಯ:** ಸೌರನೀತಿ 2014–21ರಂತೆ ಭೂಮಾಲೀಕತ್ವವುಳ್ಳ ರೈತರ ಮೂಲಕ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯ ಯೋಜನೆಯಡಿಯಲ್ಲಿ 1 ರಿಂದ 3 ಮೆ.ವ್ಯಾ ಸಾಮರ್ಥ್ಯದ ಸೌರ ವಿದ್ಯುತ್ ಘಟಕಗಳ ಸಾಮರ್ಥ್ಯವನ್ನು ವಿದ್ಯುತ್ ವಿತರಣಾ ಕಂಪನಿಗೆ ವರ್ಗಾಯಿಸುವ ಬಗ್ಗೆ.

**ಓದಲಾಗಿದೆ:**
1. ಸೌರನೀತಿ 2014–21ರ ಅಧಿಸೂಚನೆ ಸಂಖ್ಯೆ: ಇಎನ್ 21 ವಿಎಸ್‌ಸಿ 2014 ದಿನಾಂಕ: 22.05.2014.
2. ಸರ್ಕಾರದ ಆದೇಶ ಸಂಖ್ಯೆ: ಇಎನ್ 62 ವಿಎಸ್‌ಸಿ 2014 ದಿನಾಂಕ: 26–08–2014
3. ಸರ್ಕಾರದ ಆದೇಶ ಸಂಖ್ಯೆ: ಇಎನ್ 62 ವಿಎಸ್‌ಸಿ 2014 ದಿನಾಂಕ: 09.03.2015.
4. ವ್ಯವಸ್ಥಾಪಕ ನಿರ್ದೇಶಕರು, ಕೆಆರ್‌ಇಡಿಎಲ್ ರವರ ಪತ್ರ ಸಂಖ್ಯೆ: ಕೆಆರ್‌ಇಡಿಎಲ್/07/ಎಸ್‌ಸಿ/ಭೂಮಾಲೀಕರು–233/2015/2691 ದಿನಾಂಕ: 06.08.2015.

**ಪ್ರಸ್ತಾವನೆ:**

ರಾಜ್ಯದಲ್ಲಿ ಸೌರ ನೀತಿ 2014–21ರಡಿಯಲ್ಲಿ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯನ್ನು ಉತ್ತೇಜಿಸುವ ಸಲುವಾಗಿ, ಭೂ ಮಾಲೀಕತ್ವದ ರೈತರ ಭೂಮಿಯನ್ನು ಬಳಸಿ 1 ರಿಂದ 3 ಮೆ. ವ್ಯಾ ಸಾಮರ್ಥ್ಯದ ಸೌರ ವಿದ್ಯುತ್ ಘಟಕಗಳನ್ನು ಸ್ಥಾಪಿಸಲು ಸರ್ಕಾರದಿಂದ ಮಾರ್ಗಸೂಚಿಗಳನ್ನು ಮೇಲೆ ಓದಲಾದ (2)ರಲ್ಲಿ ಹೊರಡಿಸಲಾಗಿದೆ. ಸೌರ ನೀತಿ 2014–21ರನ್ವಯ ಈ ಯೋಜನೆಗೆ ಒಟ್ಟು 300 ಮೆ.ವ್ಯಾ ಸಾಮರ್ಥ್ಯವನ್ನು ನೀತಿಯ ಅವಧಿಗೆ ನಿಗದಿಪಡಿಸಲಾಗಿರುತ್ತದೆ. ಈ ಮಾರ್ಗಸೂಚಿಗಳನ್ವಯ ಈಗಾಗಲೇ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ವಿದ್ಯುತ್ ವಿತರಣಾ ಕಂಪನಿಗಳ ಪರವಾಗಿ 1 ರಿಂದ 3 ಮೆ. ವ್ಯಾ ಸಾಮರ್ಥ್ಯದ ಸೋಲಾರ್ ಪವರ್ ಘಟಕಗಳನ್ನು ಸ್ಥಾಪಿಸಲು ಅರ್ಜಿಗಳನ್ನು ಆನ್‌ಲೈನ್ ವ್ಯವಸ್ಥೆಯ ಮೂಲಕ ಆಹ್ವಾನಿಸಲಾಗಿತ್ತು ಮತ್ತು ಕ್ರೆಡಲ್ ಸಂಸ್ಥೆಯು ಅರ್ಜಿಗಳನ್ನು ಪರಿಶೀಲಿಸಿ, ಅರ್ಹ ಅರ್ಜಿದಾರರಿಗೆ ಹಂಚಿಕೆಯನ್ನು ನೀಡಿರುತ್ತದೆ.

ವ್ಯವಸ್ಥಾಪಕ ನಿರ್ದೇಶಕರು, ಕ್ರೆಡಲ್ ರವರು ಮೇಲೆ ಓದಲಾದ (4)ರಲ್ಲಿ ಈ ಯೋಜನೆಯಡಿ ಈಗಾಗಲೇ ವಿದ್ಯುತ್ ವಿತರಣಾ ಕಂಪನಿಗಳಿಗೆ ನಿಗದಿಪಡಿಸಿರುವ ಸಾಮರ್ಥ್ಯಕ್ಕೆ ಅರ್ಹ ಅರ್ಜಿದಾರರಿಗೆ ಹಂಚಿಕೆಯನ್ನು ನೀಡಲಾಗಿರುತ್ತದೆ. ಆದರೆ ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗೆ ಓರ್ವ ಅರ್ಹ ಅರ್ಜಿದಾರರಾದ ಶ್ರೀಮತಿ. ಮಾನಸ ರವರು ಡಿ.ಡಿ. ಯನ್ನು ತಪ್ಪಾಗಿ ನಮೂದು ಮಾಡಿದ್ದು ಅವರಿಗೆ 3 ಮೆ.ವ್ಯಾ ಸಾಮರ್ಥ್ಯವನ್ನು ಮ.ವಿ.ಕಂ ಯಲ್ಲಿ ಕಾದಿರಿಸಲಾಗಿತ್ತು. ಶ್ರೀಮತಿ. ಮಾನಸ ರವರು ಬೆವಿಕಂ ನಲ್ಲಿಯೂ ಅರ್ಜಿ ಸಲ್ಲಿಸಿದ್ದು ಅಲ್ಲಿ ಎಲ್ಲಾ ವಿವರಗಳನ್ನು ಸಮರ್ಪಕವಾಗಿ ನೀಡಿದ್ದು, ಈಗಾಗಲೇ ವಿದ್ಯುತ್ ಖರೀದಿ ಒಪ್ಪಂದ ಮಾಡಿರುತ್ತಾರೆ. ಆದುದರಿಂದ ಮೆ.ವಿ.ಕಂ. ನಲ್ಲಿ 3 ಮೆ.ವ್ಯಾ ಸಾಮರ್ಥ್ಯವು ಉಳಿಕೆಯಾಗಿದ್ದು ಜೇಷ್ಠತೆಯಲ್ಲಿ ಯಾವುದೇ ಅರ್ಹ ಅರ್ಜಿದಾರರು ಇರುವುದಿಲ್ಲ. ಈ ಹಿನ್ನೆಲೆಯಲ್ಲಿ ಮ.ವಿ.ಕಂ ನಲ್ಲಿ ಉಳಿಕೆಯಾಗಿರುವ ಈ 3 ಮೆ.ವ್ಯಾ ಸಾಮರ್ಥ್ಯವನ್ನು ಬೆವಿಕಂ ಗೆ ವರ್ಗಾಯಿಸಲು ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ, ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಯಲ್ಲಿ ಉಳಿಕೆಯಾಗಿರುವ 3 ಮೆ.ವ್ಯಾ ಸಾಮರ್ಥ್ಯವನ್ನು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಯಲ್ಲಿ ಜೇಷ್ಠತೆಯಲ್ಲಿ ಅರ್ಹವಿರುವ ಅರ್ಜಿದಾರರಿಗೆ ಹಂಚಿಕೆ ನೀಡಲು ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 62 ವಿಎಸ್‌ಸಿ 2014 ಬೆಂಗಳೂರು, ದಿನಾಂಕ: 25.08.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಭೂಮಾಲೀಕತ್ವವುಳ್ಳ ರೈತರ ಮೂಲಕ ವಿಕೇಂದ್ರಿಕೃತ ವಿದ್ಯುತ್ ಉತ್ಪಾದನೆಯ ಯೋಜನೆಯಡಿಯಲ್ಲಿ 1 ರಿಂದ 3 ಮೆ.ವ್ಯಾ ಸಾಮರ್ಥ್ಯದ ಸೌರ ವಿದ್ಯುತ್ ಘಟಕಗಳನ್ನು ಸ್ಥಾಪಿಸಲು ಮಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಯಲ್ಲಿ ಉಳಿದಿರುವ 3 ಮೆ.ವ್ಯಾ ಸಾಮರ್ಥ್ಯವನ್ನು ಬೆಂಗಳೂರು ವಿದ್ಯುಚ್ಛಕ್ತಿ ಸರಬರಾಜು ಕಂಪನಿಗೆ ವರ್ಗಾಯಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿನ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಜಿ. ಎನ್. ಯಡ್ರಾವಿ**
ಸರ್ಕಾರದ ಉಪ ಕಾರ್ಯದರ್ಶಿ
ಇಂಧನ ಇಲಾಖೆ

PR. 530

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59